# "ಕನ್ನಡ ಭಾಷೆಯ ಕಾಲಘಟ್ಟಗಳು"

ಕನ್ನಡ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ನಿಬಂಧ


ಸಂಶೋಧಕರು

ಸವಿತ.ವಿ

ಮಾರ್ಗದರ್ಶಕರು

ಪ್ರೊ. ಸೋಮಶೇಖರ ಗೌಡ





ಕರ್ನಾಟಕ ಸಂಘ (ರಿ). ಮಂಡ್ಯ

ಎಂ.ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ. ಹಂಪಿ- ಮಾನ್ಯತೆ ಪಡೆದಿದೆ)

2007-2008



486

# “ಕನ್ನಡ ಭಾಷೆಯ ಕಾಲಘಟ್ಟಗಳು”

ಕನ್ನಡ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ನಿಬಂಧ


<u>ಸಂಶೋಧಕರು</u>

ಸವಿತ.ವಿ

<u>ಮಾರ್ಗದರ್ಶಕರು</u>

ಪ್ರೊ. ಸೋಮಶೇಖರ ಗೌಡ








ಕರ್ನಾಟಕ ಸಂಘ (ರಿ), ಮಂಡ್ಯ

ಎಂ.ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ. ಹಂಪಿ- ಮಾನ್ಯತೆ ಪಡೆದಿದೆ)

2007-2008



ಗ್ರಂಥಾಲಯ.
ಕನ್ನಡ ವಿಶ್ವವಿದ್ಯಾಲಯ. ಹಂಪಿ

## ಮಾರ್ಗದರ್ಶಕರ ಪ್ರಮಾಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್.ಶ್ರೀಕಂಠೇಶ ಗೌಡ ಸಂಶೋಧನಾ ಕೇಂದ್ರದಲ್ಲಿ 2007-08ನೇ ಸಾಲಿನ ಕನ್ನಡ ಎಂ.ಫಿಲ್ ಪದವಿಗಾಗಿ ಕು. ಸವಿತ.ವಿ ಅವರು **"ಕನ್ನಡ ಭಾಷೆಯ ಕಾಲಘಟ್ಟಗಳು"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಸಿದ್ಧಪಡಿಸಿರುತ್ತಾರೆ. ಈ ನಿಬಂಧವಾಗಲಿ, ನಿಬಂಧದ ಅಧ್ಯಾಯವಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲ. ಈ ಸಂಶೋಧನಾ ನಿಬಂಧವನ್ನು ಕನ್ನಡ ಎಂ.ಫಿಲ್ ಪದವಿಗೆ ಸಂಬಂಧಿಸಿದಂತೆ ಮೌಲ್ಯ ಸ್ವೀಕಾರಕ್ಕಾಗಿ ಒಪ್ಪಿಸುತ್ತಿರುವುದಕ್ಕೆ ನನ್ನ ಒಪ್ಪಿಗೆ ಇದೆ.

ದಿನಾಂಕ: 10/03/2008

ಮಾರ್ಗದರ್ಶಕರ ಸಹಿ

**ಪ್ರೊ. ಸೋಮಶೇಖರಗೌಡ**

# ಸಂಶೋಧಕರ ಘೋಷಣೆ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್.ಶ್ರೀಕಂಠೇಶ ಗೌಡ ಸಂಶೋಧನಾ ಕೇಂದ್ರದಲ್ಲಿ 2007–08ನೇ ಸಾಲಿಗೆ ಕನ್ನಡ ಎಂ.ಫಿಲ್ ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ ನನ್ನ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **"ಕನ್ನಡ ಭಾಷೆಯ ಕಾಲಘಟ್ಟಗಳು"** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು **"ಪ್ರೊ.ಸೋಮಶೇಖರ್ ಗೌಡ"** ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ, ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್ ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಸವಿತ.ವಿ

ದಿನಾಂಕ: 10/09/2008 ಸಂಶೋಧಕರ ಸಹಿ

ಸ್ಥಳ: ಮಂಡ್ಯ (ಸವಿತ.ವಿ)

ಕನ್ನಡ ಎಂ.ಫಿಲ್

ಎಂ.ಎಲ್.ಶ್ರೀಕಂಠೇಶ ಗೌಡ ಸಂಶೋಧನಾ ಕೇಂದ್ರ

(ಹಂಪಿ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿದೆ)

ಕರ್ನಾಟಕ ಸಂಘ(ರಿ)

# ಪರಿವಿಡಿ

ಅಧ್ಯಾಯ.೧

# ಅಧ್ಯಯನದ ಸ್ವರೂಪ, ಉದ್ದೇಶ ಮತ್ತು ವ್ಯಾಪ್ತಿ

'ಕನ್ನಡ' ಎಂಬ ಪದ ದೇಶ ಸೂಚಕವಾಗಿ, ಭಾಷಾ ಸೂಚಕವಾಗಿ, ಜನಾಂಗ ಸೂಚಕವಾಗಿ ಬಳಕೆಯಾಗಿರುವುದನ್ನು ಕಾಣಬಹುದಾಗಿದೆ. ಒಂದು ನಿರ್ದಿಷ್ಟ ಭೂಪ್ರದೇಶ, ನಿರ್ದಿಷ್ಟ ಜನಸಮುದಾಯ ಮತ್ತು ಆ ಜನ ಸಮುದಾಯ ಮಾತನಾಡುವ ಭಾಷೆ ಅಂದರೆ 'ಕನ್ನಡ ನಾಡು','ಕನ್ನಡಿಗರು', 'ಕನ್ನಡ ಭಾಷೆ' ಹೀಗೆ ಕನ್ನಡ ಪದ ಬಳಕೆಯಾಗಿದೆ. ಈ ಪದಕ್ಕೆ ಸಾವಿರಾರು ವರ್ಷಗಳ ಇತಿಹಾಸವಿರುವುದು ಹಲವಾರು ಸಾಕ್ಷ್ಯಾಧಾರಗಳಿಂದ ದೃಢಪಟ್ಟರೂ ಇದರ ಉಗಮ ಮತ್ತು ಪ್ರಾಚೀನತೆಯ ಬಗ್ಗೆ ಸ್ಪಷ್ಟ ನಿಲುವು ತಳೆಯುವುದು ಇನ್ನೂ ಸಾಧ್ಯವಾಗಿಲ್ಲ.

ಸಧ್ಯಕ್ಕೆ ದೊರೆತಿರುವ ಆಧಾರದ ಪ್ರಕಾರ ಮೂಲ ದ್ರಾವಿಡ ಭಾಷೆಯ ಅತ್ಯಂತ ಪ್ರಾಚೀನ ಭಾಷೆಗಳಲ್ಲಿ ತಮಿಳಿನ ನಂತರ ಕನ್ನಡ ಎರಡನೇ ಸ್ಥಾನದಲ್ಲಿ ಗುರುತಿಸಿಕೊಂಡಿದೆ. ಪೂರ್ವದಲ್ಲಿ ತಮಿಳು, ಕನ್ನಡ, ತೆಲುಗು, ಮಲಯಾಳಂ ಇವು ಹೆಸರಾಂತ ದ್ರಾವಿಡ ಭಾಷೆಗಳು. ಕಾಲಾನಂತರದಲ್ಲಿ ಮೂಲದಿಂದ ಬೇರ್ಪಟ್ಟ ಕನ್ನಡ ಭಾಷೆ ಕ್ರಮೇಣವಾಗಿ ತನ್ನದೇ ಆದ ಪದಸಂಪತ್ತು, ಅರ್ಥಸಂಪತ್ತು, ಲಿಪಿಯನ್ನು ಹೊಂದಿ ಪ್ರವರ್ಧಮಾನಕ್ಕೆ ಬಂತು.

"ಕ್ರಿ.ಪೂ ಐದು ಅಥವಾ ನಾಲ್ಕನೇ ಶತಮಾನದ ವೇಳೆಗೆ ಕನ್ನಡ ಭಾಷೆ ಮೂಲದ್ರಾವಿಡ ಭಾಷೆಯಿಂದ ಕವಲೊಡೆದು ಸ್ವತಂತ್ರಗೊಳ್ಳಲಾರಂಭಿಸಿತು. ತದನಂತರ ಕ್ರಿ.ಪೂ ಮೂರನೇ ಶತಮಾನದಲ್ಲಿ ಅದು ಸಂಪೂರ್ಣ ಸ್ವತಂತ್ರವಾಗಿ ಸಾಕಷ್ಟು ವ್ಯಾಪಕವಾಗಿ ಬಳಕೆಗೊಳ್ಳಲಾರಂಭಿಸಿತು. ಕ್ರಿ.ಶ. ೪-೫ನೆಯ ಶತಮಾನದ ವೇಳೆಗೆ ಸ್ವತಂತ್ರ ಲಿಪಿಯನ್ನು ರೂಢಿಸಿಕೊಂಡು ಭಾಷೆಯನ್ನು ಬರಹರೂಪದಲ್ಲಿ ಕಾಣಿಸಿಕೊಂಡಂತೆ ತೋರುತ್ತದೆ."(ಕನ್ನಡ ಭಾಷಾ ಸ್ವರೂಪ-ಸಂಗಮೇಶ ಸವದತ್ತಿಮಠ: ಪು-೩೧)

ಯಾವುದೇ ಒಂದು ಭಾಷೆ ಮೂಲದಲ್ಲಿಯೇ ಲಿಪಿ, ಪದಸಂಪತ್ತನ್ನು ಹೊಂದಿರುವುದಿಲ್ಲ. ಆಡು ಮಾತಿನ ಮೂಲಕ ಬಾಯಿಂದ ಬಾಯಿಗೆ ರವಾನೆಯಾಗುತ್ತಾ ಯಾವುದೋ ಒಂದು ಹಂತದಲ್ಲಿ ಲಿಪಿಯನ್ನು, ಪದ ಸಂಪತ್ತನ್ನು ಹೊಂದುತ್ತಾ ಹೋಗುತ್ತದೆ. ಇನ್ನು ವ್ಯಾಕರಣಬದ್ಧ ಭಾಷೆ ರೂಪುಗೊಳ್ಳಬೇಕಾದರೆ ಹಲವಾರು

ವರ್ಷಗಳು ಬೇಕಾಗುತ್ತದೆ. ಸಾಹಿತ್ಯಕವಾಗಿ ಹಾಗೂ ವ್ಯಾವಹಾರಿಕವಾಗಿ ಬಳಕೆಗೊಂಡಾಗ ಮಾತ್ರ ವ್ಯಾಕರಣದ ರಚನೆ ರೂಪುಗೊಳ್ಳಲು ಆರಂಭವಾಗುತ್ತದೆ.

ಇಂತಹ ಎಲ್ಲಾ ಅಂಶಗಳು ಕನ್ನಡ ಭಾಷೆಯಲ್ಲಿ ಕ್ರಿ.ಶ. ಸು ೭,೮ ನೇ ಶತಮಾನಕ್ಕಾಗಲೇ ಸಂಪೂರ್ಣವಾಗಿ ನಡೆದಿರುವುದನ್ನು ಕಾಣಬಹುದಾಗಿದೆ. ಇದಕ್ಕೆ ಉದಾಹರಣೆಯಾಗಿ ಹಲವಾರು ಶಾಸನಗಳು, ಕೃತಿಗಳು ಕನ್ನಡ ಭಾಷೆಯಲ್ಲಿ ದೊರೆಯುತ್ತವೆ.

ಒಂದು ಭಾಷೆ ನಿಂತ ನೀರಾಗಿರದೆ ಬದಲಾವಣೆಯ ಅಂಶವನ್ನು ಹೊಂದಿದಾಗ ಮಾತ್ರ ಅದು ಜೀವಂತವಾಗಿ ಹಾಗೂ ವ್ಯಾಪಕವಾಗಿ ಬೆಳೆಯಲು ಸಾಧ್ಯ. ಅಂತೆಯೇ ಅದು ಗ್ರಂಥಸ್ಥವಾದಾಗ ಅಥವಾ ಬರವಣಿಗೆಯ ರೂಪದಲ್ಲಿ ದಾಖಲಾದಾಗ ಮಾತ್ರ ಆ ಭಾಷೆಯ ಪ್ರಾಚೀನತೆಯನ್ನು ಗುರುತಿಸಲು ಸಹಾಯಕವಾಗುತ್ತದೆ. ಅಲ್ಲದೆ ಆಯಾ ಕಾಲಘಟ್ಟದಲ್ಲಿ ಭಾಷೆಯಲ್ಲಿನ ಧ್ವನಿ, ಧ್ವನಿಮಾ, ಆಕೃತಿಮಾ, ಪದರಚನೆ, ವಾಕ್ಯರಚನೆಗಳಲ್ಲಾದ ಬದಲಾವಣೆಯನ್ನು ಕಾಲಘಟ್ಟಕ್ಕೆ ಅನುಗುಣವಾಗಿ ಗುರುತಿಸಲು ಸಾಧ್ಯವಾಗುತ್ತದೆ. ಕನ್ನಡ ಭಾಷೆಯಲ್ಲಿ ಇಂತಹ ಅಂಶಗಳನ್ನು ಗುರುತಿಸಬಹುದಾಗಿದೆ. ಇವುಗಳನ್ನೇ ಬಿ.ಎಲ್.ರೈಸ್, ಆರ್.ನರಸಿಂಹಾಚಾರ್ಯ, ರಂ.ಶ್ರೀ.ಮುಗಳಿ ಮುಂತಾದ ವಿದ್ವಾಂಸರು 'ಕನ್ನಡದ ಅವಸ್ಥಾಭೇದ'ಗಳು ಎಂದು ಗುರುತಿಸಿದ್ದಾರೆ.

ಇವುಗಳಷ್ಟೇ ಅಲ್ಲದೆ ವಿವಿಧ ಕಾಲಘಟ್ಟದಲ್ಲಿ ರಚನೆಯಾದ ಸಾಹಿತ್ಯಗಳು ವಿವಿಧ ಛಂದಃ ಪ್ರಕಾರಗಳಲ್ಲಿ ಕಂಡುಬರುವುದನ್ನು ಗುರುತಿಸಬಹುದು. ಉದಾಹರಣೆಗೆ ಹಳಗನ್ನಡ ಸಾಹಿತ್ಯ ಚಂಪೂ, ಕಂದ ಪ್ರಕಾರಗಳಲ್ಲಿ ರಚನೆಯಾಗಿದ್ದರೆ, ನಡುಗನ್ನಡ ಸಾಹಿತ್ಯ ಷಟ್ಪದಿ, ರಗಳೆ ಮುಂತಾದ ಪ್ರಕಾರಗಳನ್ನು ಒಳಗೊಂಡಿದೆ. ಇದರ ಜೊತೆಗೆ ಒಂದು ಭಾಷೆಯ ಮೇಲೆ ಬೇರೆ ಭಾಷೆಯ ಮತ್ತು ಬೇರೆ ಧರ್ಮದ ಪ್ರಭಾವ ಎಷ್ಟರ ಮಟ್ಟಿಗೆ ಪ್ರಭಾವ ಬೀರಿದೆ ಎಂಬುದನ್ನು ತಿಳಿಯಬಹುದಾಗಿದೆ. ಉದಾಹರಣೆಗೆ ಪಂಪಯುಗದ ಸಂದರ್ಭದಲ್ಲಿ ಕನ್ನಡ ಉತ್ತಮ ಸ್ಥಿತಿಯಲ್ಲಿ ಇದ್ದರೂ ಅವರು ಸಂಸ್ಕೃತದ ಪ್ರಭಾವ ಮತ್ತು ಪ್ರೇರಣೆಯ ಹೊರತಾಗಿ ಕಾವ್ಯ ರಚಿಸಲು ಸಾಧ್ಯವಾಗಲಿಲ್ಲ. ಕಾರಣ ಅಂದಿನ ಕಾಲದಲ್ಲಿ ಸಂಸ್ಕೃತ ಬಲ್ಲವರಿಗೆ ರಾಜ ಮನ್ನಣೆ, ಸಮಾಜದಲ್ಲಿ ಮರ್ಯಾದೆ, ಪ್ರತಿಷ್ಠೆಗಳು ಹೆಚ್ಚಾಗಿ ಲಭಿಸುತ್ತಿದ್ದರಿಂದ ಕನ್ನಡಕ್ಕೆ ಬದಲಾಗಿ ಹೆಚ್ಚಿನ ರೀತಿಯಲ್ಲಿ ಸಂಸ್ಕೃತವನ್ನೇ ಅಂದಿನ ಕಾಲದ ಕವಿಗಳು ವಿಶೇಷವಾಗಿ ಸಂಸ್ಕೃತ ಬಳಸಿರುವುದನ್ನು ಕಾಣಬಹುದಾಗಿದೆ. ಇಂತಹ ಸಂದರ್ಭದಲ್ಲಿ ಸ್ಥಳೀಯವಾಗಿದ್ದ ಕನ್ನಡ ಭಾಷೆಯ ಸ್ಥಿತಿಯನ್ನು ತಿಳಿಯಲು ಸಾಧ್ಯವಾಗುವುದಿಲ್ಲ. ಅದಕ್ಕೆ ವಿರುದ್ಧವಾಗಿ

ಸ್ಥಳೀಯರ ಭಾಷೆಗೆ ಹೆಚ್ಚು ಒತ್ತು ಕೊಟ್ಟು ಆಡು ಭಾಷೆಯಲ್ಲಿಯೇ ಸಾಹಿತ್ಯ ಸೃಷ್ಟಿಯಾಗಿರುವುದನ್ನು ವಚನಕಾರರ ಕಾಲಘಟ್ಟದಲ್ಲಿ ಕಾಣಬಹುದಾಗಿದೆ. ಹೀಗೆ ಒಂದು ಕಾಲಘಟ್ಟದಿಂದ ಇನ್ನೊಂದು ಕಾಲಘಟ್ಟದ ಭಾಷೆಯ ಬಳಕೆಯಲ್ಲಿನ ವೈಪರೀತ್ಯವನ್ನು ಗುರುತಿಸಲು ಐತಿಹಾಸಿಕ ಹಿನ್ನಲೆಯಲ್ಲಿ ಸಾಹಿತ್ಯಾಧ್ಯಯನ ಅವಶ್ಯವಾಗಿದೆ ಮತ್ತು ಇಂತಹ ಸುದೀರ್ಘ ಸಾಹಿತ್ಯ ಇತಿಹಾಸವುಳ್ಳ ಕನ್ನಡ ಭಾಷೆಯ ರೂಪ ರಚನೆಯನ್ನು ಅರಿಯುವ ಉದ್ದೇಶದಿಂದ ಈ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿ ಆಯಾ ಕಾಲಘಟ್ಟದ ಪ್ರಮುಖ ಕೃತಿಗಳನ್ನು ಮತ್ತು ಛಂದಸ್ಸಿನ ಪ್ರಕಾರಗಳನ್ನು ತೆಗೆದುಕೊಂಡು ನನ್ನ ಪ್ರಬಂಧವನ್ನು ಮಂಡಿಸುವ ಪ್ರಯತ್ನವನ್ನು ಮಾಡಲಾಗಿದೆ. ಈ ಪ್ರಬಂಧದಲ್ಲಿ ಭಾಷೆ ಮತ್ತು ಲಿಪಿಯ ಸಂಬಂಧ ಮತ್ತು ಕನ್ನಡ ನಾಡು–ನುಡಿಯ ಪ್ರಾಚೀನತೆಯ ಸ್ಥೂಲ ಪರಿಚಯದ ಜೊತೆಗೆ ಭಾಷೆಯ ಕಾಲಘಟ್ಟವನ್ನು 'ಪೂರ್ವದ ಹಳಗನ್ನಡ', 'ಹಳಗನ್ನಡ', 'ನಡುಗನ್ನಡ', 'ಹೊಸಗನ್ನಡ' ಎಂದು ನಾಲ್ಕು ಹಂತಗಳಲ್ಲಿ ವಿಭಾಗಿಸಿಕೊಂಡು ಅಧ್ಯಯನವನ್ನು ಮಾಡಲಾಗಿದೆ.

**ಅಧ್ಯಾಯ.೨**

# ಭಾಷೆ ಮತ್ತು ಲಿಪಿ

'ಭಾಷೆ' ಮಾನವನ ಬಹುಪಾಲು ಚಟುವಟಿಕೆಗಳೊಂದಿಗೆ ಬೆರೆತು ಹೋಗಿದೆ. ನಮ್ಮ ನಿತ್ಯ ವ್ಯವಹಾರಗಳಲ್ಲಿ ಭಾಷೆಯ ಉಪಯೋಗವು ಸಿಂಹಪಾಲು. ಭಾಷೆಯ ಹೊರತಾಗಿ ಮನುಷ್ಯ ವ್ಯವಹರಿಸಲಾರ. ಸಮಾಜದ ಬಹುಮುಖ್ಯ ಅಂಗವಾಗಿ ಭಾಷೆಯನ್ನು ಗುರುತಿಸಬಹುದಾಗಿದೆ. "ದಿನನಿತ್ಯದಲ್ಲಿ ಸಾಮಾಜಿಕ ಸಂಪರ್ಕಕ್ಕೆ, ಅಭಿಪ್ರಾಯದ ಸಂವಹನಕ್ಕೆ ಅಂದರೆ ನಮ್ಮ ಅಭಿಪ್ರಾಯವನ್ನು ಇನ್ನೊಬ್ಬರೊಡನೆ ಸಂವಹಿಸುವುದರ ಜೊತೆಗೆ ಅವರ ಅಭಿಪ್ರಾಯವನ್ನು ನಮ್ಮೊಡನೆ ಸಂವಹನಗೊಳಿಸಿಕೊಳ್ಳಲು ಭಾಷೆಯನ್ನು ಮಧ್ಯವರ್ತಿಯಾಗಿ ಬಳಸಿಕೊಂಡಿದ್ದೇವೆ". (ಭಾಷೆ(ಸಂ)-ಕೆ.ವಿ.ನಾರಾಯಣ: ಪು-೧೪)

ಇಂತಹ ಭಾಷೆ ಯಾವಾಗ, ಯಾವ ಸಂದರ್ಭದಲ್ಲಿ, ಯಾವ ಕಾಲದಲ್ಲಿ ಜನ್ಮತಾಳಿತು ಎಂದು ಹೇಳುವುದು ಕಷ್ಟಸಾಧ್ಯ. ಅಲ್ಲದೆ ಭಾಷೆಯನ್ನು ನಿರ್ದಿಷ್ಟ ರೂಪ, ಅರ್ಥದೊಡನೆ ನಿರಂತರವಾಗಿ ಹಿಡಿದಿಡಲು ಸಾಧ್ಯವಿಲ್ಲ. ಏಕೆಂದರೆ ಅದು ಕಾಲದಿಂದ ಕಾಲಕ್ಕೆ, ಸ್ಥಳದಿಂದ ಸ್ಥಳಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ ಬದಲಾಗುತ್ತ ಹೋಗುತ್ತದೆ.

ಈ ರೀತಿಯ ಭಾಷೆಯಲ್ಲಿನ ಭಿನ್ನತೆಯನ್ನು ಎಲ್ಲಾ ಕಡೆಯೂ ಕಾಣಬಹುದು. ಅದರಲ್ಲೂ ಭಾರತದಂತಹ ಬಹುಭಾಷೆಗಳನ್ನು ಹೊಂದಿರುವ ರಾಷ್ಟ್ರದಲ್ಲಿಯೇ ಕಾಣಬಹುದಾಗಿದೆ. ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶವನ್ನು ನೋಡಿದಾಗ ಇವು ನೆರೆಹೊರೆಯ ರಾಜ್ಯಗಳು. ಆದರೆ ಇಲ್ಲಿ ಮಾತನಾಡುವ ಭಾಷೆಗಳು ಮಾತ್ರ ಬೇರೆ ಬೇರೆ.

ಉದಾಹರಣೆ:- ಕನ್ನಡದಲ್ಲಿ- ನೀರು
ತಮಿಳಿನಲ್ಲಿ- ತಣ್ಣಿ
ತೆಲುಗಿನಲ್ಲಿ- ನೀಳ್ಳು
ಮರಾಠಿಯಲ್ಲಿ-ಪಾನಿ

ಒಂದು ಭಾಷೆಯೊಳಗೆ ಅನೇಕ ಉಪಭಾಷೆಗಳಿರುತ್ತವೆ. ಇವುಗಳನ್ನು ಮುಖ್ಯವಾಗಿ ಸಾಮಾಜಿಕ ಮತ್ತು ಪ್ರಾದೇಶಿಕ ಉಪಭಾಷೆಗಳೆಂದು ವಿಂಗಡಿಸಿಕೊಳ್ಳ

ಬಹುದಾಗಿದೆ. ಮೊದಲಿನಿಂದಲೂ ಆಡು ಮಾತಿನಲ್ಲಿ ಸಾಮಾಜಿಕ, ಪ್ರಾದೇಶಿಕ ಭಿನ್ನತೆಗಳು ಇದ್ದವೆಂಬುದಕ್ಕೆ ಕವಿರಾಜಮಾರ್ಗಕಾರನಲ್ಲಿ ಉಲ್ಲೇಖವಿದೆ.

ಕನ್ನಡದಲ್ಲಿ ಸಾಮಾಜಿಕ ಉಪಭಾಷೆಗಳಾದ ಗೊಂಡ ಕನ್ನಡ, ಸೋಲಿಗ ಕನ್ನಡ, ಕೊರಗ ಕನ್ನಡ ಮತ್ತು ಪ್ರಾದೇಶಿಕ ಉಪಭಾಷೆಗಳಾದ ಮೈಸೂರು ಕನ್ನಡ, ಮಂಗಳೂರು ಕನ್ನಡ, ಧಾರವಾಡ ಕನ್ನಡ ಮುಂತಾದವುಗಳಲ್ಲಿ ಒಂದು ಪದಕ್ಕೆ ವಿವಿಧ ಅರ್ಥಗಳಿರುವುದನ್ನು ಕಾಣಬಹುದಾಗಿದೆ.

| ಸಾಮಾಜಿಕ ಉಪಭಾಷೆ:– ಶಿಷ್ಟ ಕನ್ನಡ | – ಗೊಂಡ ಕನ್ನಡ | – ಕರೆಒಕ್ಕಲರ ಕನ್ನಡ | – ಶಿಷ್ಟ |
|---|---|---|---|
| ಅರಿಲ್ | ತಾರಕಿ | ತಾರಾಕ್ಲು | ನಕ್ಷತ್ರ |
| ಬಾಯಾರಿಕೆ | ಆಸರ | | |

| ಪ್ರಾದೇಶಿಕ ಉಪಭಾಷೆ:– ಧಾರವಾಡ ಕನ್ನಡ | – ಮೈಸೂರು ಕನ್ನಡ | – ಶಿಷ್ಟ |
|---|---|---|
| ವಿಧವೆ | ತಾಯಿ | ಅಮ್ಮ |
| ಹಿಂದಗಡೆ ಬಾ | ಆಮೇಲೆ | |

ಹೀಗೆ ಒಂದು ನಿರ್ದಿಷ್ಟ ವಸ್ತು ಅಥವಾ ಪದ ಬೇರೆ ಬೇರೆ ಪ್ರದೇಶದಲ್ಲಿ, ಬೇರೆ ಬೇರೆ ಭಾಷೆಗಳಲ್ಲಿ ಪ್ರತ್ಯೇಕ ಹೆಸರಿನಿಂದ, ವಿವಿಧ ಅರ್ಥದಿಂದ ಕೂಡಿರುವುದನ್ನು ಕಾಣಬಹುದಾಗಿದೆ. ಅಂದರೆ ಒಂದು ವಸ್ತುವಿಗೆ ಎಲ್ಲಾ ಕಡೆಯೂ ನಿರ್ದಿಷ್ಟ ಹೆಸರಿರುವುದಿಲ್ಲ. ಒಂದು ಸಮಾಜದಲ್ಲಿ ವಾಸಿಸುವ ಜನರು ತಮಗೆ ಗೊತ್ತಿರುವ ಧ್ವನಿಗಳನ್ನು ಬಳಸಿ ಅದಕ್ಕೊಂದು ಹೆಸರನ್ನು ನೀಡಿರುತ್ತಾರೆ. ಜೊತೆಗೆ ಅದಕ್ಕೆ ಆ ಸಮಾಜದಲ್ಲಿ ಮಾನ್ಯತೆಯೂ ದೊರೆತಿರುತ್ತದೆ. ಅಂದರೆ ಒಂದು ಭಾಷೆ, ಆ ಭಾಷೆಯಲ್ಲಿನ ಪದ ಸಮೂಹ, ಅರ್ಥ ಸಮೂಹ ಎಲ್ಲವೂ ಯಾದೃಚ್ಛಿಕವಾದದ್ದು

ಹೀಗೆ ಭಾಷೆಯು ಸ್ಥಳದಿಂದ ಸ್ಥಳಕ್ಕೆ ಬೇರೆಯಾದಂತೆ ಕಾಲದಿಂದ ಕಾಲಕ್ಕೆ ತನ್ನ ಸ್ವರೂಪದಲ್ಲಿ ಬದಲಾವಣೆಯನ್ನು ಹೊಂದಿರುವುದನ್ನು ಕಾಣಬಹುದಾಗಿದೆ. ಈ ಹಿನ್ನಲೆಯಲ್ಲಿ ಕನ್ನಡ ಭಾಷೆಯು ಅನೇಕ ಕಾಲಘಟ್ಟಗಳಲ್ಲಿ ಬದಲಾವಣೆ ಹೊಂದಿರುವುದೇ ಸಾಕ್ಷಿಯಾಗಿದೆ.

ಈ ಅಂಶಗಳನ್ನೆಲ್ಲಾ ಗಮನಿಸಿದಾಗ ಭಾಷೆ ಬದಲಾವಣೆಯ ಗುಣ ಹೊಂದಿರುವುದನ್ನು ಗುರುತಿಸಬಹುದಾಗಿದೆ. ಅದು ನಿಂತ ನೀರಾಗಿರದೆ ಸದಾ ಪರಿವರ್ತನೆಗೆ ಒಳಗಾಗಿದೆ. ಇದಕ್ಕೆ ಲಿಪಿ ಕೂಡ ಹೊರತಾಗಿಲ್ಲ. ಇದು ಭಾಷೆಯಂತೆ ತನ್ನ ರಚನೆ, ಆಕಾರ,

ವಿಸ್ತಾರದಲ್ಲಿ ಕಾಲದಿಂದ ಕಾಲಕ್ಕೆ ಬದಲಾಗಿರುವುದನ್ನು ಗುರುತಿಸಬಹುದಾಗಿದೆ. ಆದರೆ ಲಿಪಿಗೆ ಭಾಷೆಯಷ್ಟು ಪ್ರಾಚೀನತೆ ಇಲ್ಲ. ಯಾವುದೇ ಒಂದು ಭಾಷೆ ಉಗಮಗೊಂಡಾಗ ಅದರೊಟ್ಟಿಗೆ ಲಿಪಿಯೂ ಉಗಮಗೊಂಡಿರುವುದಿಲ್ಲ. ಮೊದಲು ಚಿಹ್ನೆ ಮತ್ತು ಸಂಕೇತಗಳ ಮೂಲಕ ಭಾಷೆ ವ್ಯವಹರಿಸಿದ್ದು, ಕಾಲಾನಂತರದಲ್ಲಿ ಲಿಪಿಯ ಉಗಮ ಆರಂಭಗೊಂಡಿರಬೇಕು. ಭಾಷೆ ಮತ್ತು ಲಿಪಿಯ ಉಗಮದ ಮಧ್ಯೆ ಸಾವಿರಾರು ವರ್ಷಗಳ ಅಂತರವಿರುವುನ್ನು ಕಾಣಬಹುದಾಗಿದೆ.

ಲಿಪಿ ಇಲ್ಲದಿದ್ದರೆ ಭಾಷೆಗೆ ಅಸ್ಥಿತ್ವವಿಲ್ಲವೆಂದಲ್ಲ. ಜಗತ್ತಿನಲ್ಲಿ ಅನೇಕ ಆಡು ಭಾಷೆಗಳು ಬಳಕೆಯಲ್ಲಿವೆ. ಆದರೆ ಭಾಷೆಯ ಪ್ರಾಚೀನತೆಯನ್ನು ಅಧ್ಯಯನ ಮಾಡುವಾಗ ಲಿಖಿತ ರೂಪದ ದಾಖಲೆಗಳನ್ನು ಆಧರಿಸುತ್ತಾರೆ ಮತ್ತು ಲಿಪಿ ಹೊಂದಿರುವ ಭಾಷೆಗೆ ಸಮಾಜದಲ್ಲಿ ಹೆಚ್ಚು ಪ್ರಾಶಸ್ತ್ಯವಿರುವುದನ್ನು ಕಾಣಬಹುದಾಗಿದೆ. ಲಿಪಿ ಹೊಂದಿಲ್ಲದ ಭಾಷೆಗಳು ಲಿಖಿತ ರೂಪದಲ್ಲಿ ಸಾಹಿತ್ಯವನ್ನು ರಚಿಸುವಾಗ, ಇಲ್ಲವೆ ಪತ್ರ ವ್ಯವಹಾರ, ಇಲ್ಲವೆ ಆಡಳಿತ ವ್ಯವಹಾರ ನಡೆಸಲು ಬೇರೆ ಭಾಷೆಯಲ್ಲಿನ ಲಿಪಿಯ ಸಹಾಯವನ್ನು ಪಡೆಯಬೇಕಾಗುತ್ತದೆ. ಅಲ್ಲದೆ ಅವು ಲಿಪಿಯನ್ನು ಹೊಂದಿರುವ ಭಾಷೆಯ ಉಪಭಾಷೆಗಳಾಗಿ ಸಮಾಜದಲ್ಲಿ ಗುರುತಿಸಿಕೊಂಡಿರುವುದನ್ನು ಗಮನಿಸಬಹುದಾಗಿದೆ.

ಸಾಮಾನ್ಯವಾಗಿ ಆಡು ಮಾತಿಗೂ ಲಿಖಿತ ರೂಪದ ಭಾಷೆಗೂ ಬಹಳ ವ್ಯತ್ಯಾಸವಿರುತ್ತದೆ. "ಜನರ ನಾಲಗೆಯ ಮೇಲೆ ಬಳಕೆಯಿರುವ ಭಾಷೆಯನ್ನು ಜನಪದ ಭಾಷೆಯೆಂದು ಅಥವಾ ಸಾಮಾನ್ಯ ಭಾಷೆ ಎಂದು, ಲಿಖಿತ ರೂಪದಲ್ಲಿರುವ ಭಾಷೆಯನ್ನು ಗ್ರಂಥಸ್ಥ ಅಥವಾ ಶಿಷ್ಟಭಾಷೆ"ಯೆಂದು ಕರೆಯುತ್ತಾರೆ.

| ಸಾಮಾನ್ಯ ಭಾಷೆ | ಶಿಷ್ಟ ಭಾಷೆ |
|---|---|
| ಬರ್ತೀನಿ | ಬರುತ್ತೇನೆ |
| ಹಿಡ್ಕೊಂಡು | ಹಿಡಿದುಕೊಂಡು |

ಇತ್ತೀಚಿನ ಸಾಹಿತ್ಯದಲ್ಲಿ ಹೆಚ್ಚಾಗಿ ಆಡು ಭಾಷೆಯನ್ನೇ ಬಳಸಲಾಗುತ್ತಿದೆ. ಹೀಗೆ ಬರಹ ರೂಪದ ಭಾಷೆ ಮತ್ತು ಆಡು ಭಾಷೆಯಲ್ಲಿನ ಉಚ್ಚಾರಣೆ ಬೇರೆ ಬೇರೆ ಆಗಿದ್ದರೂ ಮೂಲ ಅರ್ಥ ಒಂದೇ ಆಗಿದೆ. ಒಟ್ಟಿನಲ್ಲಿ ಭಾಷೆಯ ಉಗಮ ಲಿಪಿಗಿಂತಲೂ ಪ್ರಾಚೀನವಾದದ್ದಾಗಿದೆ.

ಪ್ರೊ.ಕೆ.ವಿ.ನಾರಾಯಣ್ ಅವರು ಭಾಷೆ ಮತ್ತು ಲಿಪಿ ಕುರಿತು " ಮಾತು ಸಹಜ ಕ್ರಿಯೆ, ಅನೌಪಚಾರಿಕವಾಗಿ ಲಭಿಸುವಂತಹ ಸಾಧನ. ಆದರೆ ಬರಹ ಔಪಚಾರಿಕವಾಗಿ ಕಲಿಯುವ ಜ್ಞಾನ. ದೈನಂದಿನ ಭಾಷೆಯ ಚಟುವಟಿಕೆಗಳಿಗೆ ಮಾತು ಅನಿವಾರ್ಯ. ಬರಹ ಪೂರಕವಷ್ಟೆ. ಹೀಗಾಗಿ ಮೊದಲು ಭಾಷೆಯ ಸೃಷ್ಟಿಯಾಯಿತು." ಎಂದಿದ್ದಾರೆ. (ಭಾಷೆ(ಸಂ) ಕೆ.ವಿ.ನಾರಾಯಣ: ಪು-೧೮೩)

ಭಾಷೆಯ ಪ್ರಾಚೀನತೆಯ ದೃಷ್ಟಿಯಿಂದ ಆಡುಮಾತು ಪ್ರಮುಖವಾಗಿದ್ದರೂ ಲಿಪಿ ಕೂಡ ಅದಕ್ಕೆ ಪೂರಕವಷ್ಟೇ ಅಲ್ಲದೆ ಪೋಷಕವಾಗಿಯೂ ನಿಲ್ಲುತ್ತದೆ. ಬರಹ ರೂಪಕ್ಕೆ ಬಂದಂತಹ ಭಾಷೆ ಸಮಾಜದ ಪ್ರಮುಖ ಅಂಗವಾಗಿ ಕಾರ್ಯ ನಿರ್ವಹಿಸುತ್ತದೆ.

ಅಧ್ಯಾಯ.೩

# ಕನ್ನಡ ನಾಡು ನುಡಿಯ ಪ್ರಾಚೀನತೆ

ಭಾರತ ಸಂವಿಧಾನದಲ್ಲಿ ಮಾನ್ಯತೆ ಪಡೆದಿರುವ ೧೮ ಭಾಷೆಗಳಲ್ಲಿ ಒಂದಾದ ಕನ್ನಡ ಭಾಷೆ ದ್ರಾವಿಡ ಪರಿವಾರದ ಪ್ರಾಚೀನ ಭಾಷೆಗಳಲ್ಲಿ ೨ನೆಯ ಸ್ಥಾನವನ್ನು ಹೊಂದಿದ್ದು, ಸುಮಾರು ೪ ಕೋಟಿ ಜನರ ಮಾತೃಭಾಷೆಯಾಗಿದೆ. ಸುಮಾರು ಒಂದುವರೆ ಸಾವಿರ ವರ್ಷಗಳ ಸಾಹಿತ್ಯ ಹಾಗೂ ಶಿಲಾಶಾಸನಗಳ ಚರಿತ್ರೆಯನ್ನು ಹೊಂದಿರುವ ಈ ಭಾಷೆ ಸುಸಂಸ್ಕೃತ ಜನಾಂಗವೊಂದರ ಆಡುನುಡಿಯಾಗಿಯೂ, ಸಾಹಿತ್ಯ ರಚನೆಯ ಮಾಧ್ಯಮವಾಗಿಯೂ ವಿಕಾಸಗೊಂಡಿದ್ದು ವಿಶ್ವ ಸಾಹಿತ್ಯಕ್ಕೆ ಅಮೂಲ್ಯವಾದ ಕಾಣಿಕೆಯನ್ನು ಸಲ್ಲಿಸಿದೆ. ಇಂತಹ ಒಂದು ಭಾಷೆಯ ಪ್ರಾಚೀನತೆಯನ್ನು ಕುರಿತಾದ ಅಧ್ಯಯನ ಬಹಳ ಅವಶ್ಯವಾಗಿದೆ.

'ಕನ್ನಡ' ಎಂಬ ಶಬ್ದ ಒಂದು ಭಾಷೆಯ ಹೆಸರನ್ನು ಸೂಚುಸುವಂತೆ ಈ ಭಾಷೆಯನ್ನಾಡುವ ಜನರನ್ನೂ, ಅವರು ವಾಸಿಸುವ ಪ್ರದೇಶವನ್ನೂ ಸೂಚುಸುತ್ತದೆಂದು ಹಲವಾರು ಆಧಾರಗಳಿಂದ ತಿಳಿಯಬಹುದಾಗಿದೆ. ಈ ಶಬ್ದದ ರೂಪನಿಷ್ಪತ್ತಿಯ ವಿಚಾರವಾಗಿ ಸಾಕಷ್ಟು ಚರ್ಚೆ ನಡೆದಿದೆ. ಕವಿರಾಜಮಾರ್ಗಕಾರನೇ ಕನ್ನಡ ಶಬ್ದವನ್ನು ಭಾಷೆ ಹಾಗೂ ಪ್ರದೇಶವಾಚಿಯಾಗಿ ಬಳಸಿದ್ದಾನೆ. 'ಪಲಗನ್ನಡ' ಎಂಬಲ್ಲಿ ಭಾಷೆಯನ್ನು ಕುರಿತಾಗಿ " ಕಾವೇರಿಯಿಂದಮಾಗೋದಾವರಿವರಮಿರ್ದ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ", "ಒಕ್ಕುಂದದ ನಡುವಣ ನಾಡೆ ಕನ್ನಡದ ತಿರುಳ್" ಈ ಎರಡೂ ವಾಕ್ಯಗಳಲ್ಲಿ ಪ್ರದೇಶವಾಚಕವಾಗಿ ಕನ್ನಡ ಶಬ್ದವನ್ನು ಕವಿರಾಜಮಾರ್ಗಕಾರ ಬಳಸಿದ್ದಾನೆ. ಆಂಡಯ್ಯ ಹೇಳುವ "ಕನ್ನಡಮೆನಿಪ್ಪ ನಾಡು ಚೆಲ್ವಾಯಿತು" ಎಂಬಲ್ಲಿಯೂ ಪ್ರದೇಶ ಸೂಚಕವಾಗಿದೆ. ಅಲ್ಲದೆ 'ಕನ್ನಡ, ಕಮ್ಮೆ, ತೆಲುಗ, ತಿಗುಳ' ಎಂಬ ನಿಜಗುಣ ಶಿವಯೋಗಿಯಿಂದ ಈ ಶಬ್ದ ಜನಾಂಗ ಅಥವಾ ಕುಲವನ್ನು ಸೂಚಿಸುತಿತ್ತು ಎಂದು ಊಹಿಸಲಾಗಿದೆ. ಈಗ 'ಕನ್ನಡ, ಕನ್ನಡ ನಾಡು, ಕನ್ನಡಿಗ' ಶಬ್ದಗಳು 'ಭಾಷೆ, ಪ್ರದೇಶ, ಕುಲ–ಜನ' ಎಂಬ ಅರ್ಥದಲ್ಲಿ ಬಳಕೆಯಾಗುತ್ತಿವೆ. ಕನ್ನಡ ನಾಡು ಶಬ್ದಕ್ಕೆ ಬದಲಾಗಿ 'ಕರ್ನಾಟಕ' ಮಾನ್ಯತೆ ಪಡೆದು ರೂಢಿಯಲ್ಲಿದೆ.

'ಕರ್ನಾಟಕ' ಎಂಬ ಶಬ್ದಕ್ಕೆ ಪ್ರಾಚೀನ ಇತಿಹಾಸವಿದೆ. ಮಹಾಭಾರತದಲ್ಲಿ 'ಕರ್ಣಾಟ' ಶಬ್ದವಿದೆ. ಕ್ರಿ.ಶ. ೧ನೇ ಶತಮಾನದ್ದು ಎನ್ನಲಾದ ಮಾರ್ಕಂಡೇಯ ಪುರಾಣದಲ್ಲಿ ಉಕ್ತವಾಗಿರುವ ದೇಶಗಳಲ್ಲಿ ಕರ್ಣಾಟಕವೂ ಒಂದಾಗಿದೆ. ಸೋಮದೇವನ ಕಥಾಸರಿತ್ಸಾಗರದಲ್ಲಿ ಮತ್ತು ವರಹಾಮಿಹಿರನ ಬೃಹತ್ಸಂಹಿತೆಯಲ್ಲಿ 'ಕರ್ಣಾಟ' ಎಂಬ ಪದ ಉಕ್ತವಾಗಿದೆ. ಶೂದ್ರಕನ ಮೃಚ್ಛಕಟಿಕ ನಾಟಕದಲ್ಲಿನ ಒಂದು ಪಾತ್ರವಾದ ಚಂದನಕ 'ಕರ್ಣಾಟ'ವನ್ನು ಹೇಳುತ್ತಾನೆ. ಗಂಗಭೂವಿಕ್ರಮನ ಬೆದಕೂರು ಶಾಸನದಲ್ಲಿ ಅಸ್ಯಸೀಮಾ;ಕರ್ನಾಟಕೀ... ಎಂದಿದೆ.

ಸಂಸ್ಕೃತದಲ್ಲಿ ಕರ್ಣಾಟ, ಕರ್ಣಾಟಕ ಎಂಬ ಎರಡು ರೂಪಗಳೂ ಇವೆ ಮತ್ತು ಇವೆರಡು ಸಮನಾರ್ಥಕವಾಗಿವೆ. 'ಕರ್ಣೇಷು ಅಟತಿ ಕರ್ಣಾಟ' ಎಂದು ಶಬ್ದರತ್ನಾವಲಿ ಮತ್ತು ವಿಶ್ವಗುಣಾದರ್ಶಗಳಲ್ಲಿ ವಿವರಣೆ ಇದೆ. ಅಂದರೆ ಕಿವಿಗಳಲ್ಲಿ ಬಿದ್ದು ಪ್ರಸಿದ್ಧವಾದುದು ಎಂದರ್ಥ. ಈ ನಾಡಿಗೆ ಈ ಹೆಸರು ಬರಲು ಕಾರಣವನ್ನು ಸ್ಕಂದ ಪುರಾಣದಲ್ಲಿ ಕಾಣಬಹುದು. ಈ ಪುರಾಣದಲ್ಲಿ ಬರುವ 'ಕರ್ಣಾಟ' ಎಂಬ ರಾಕ್ಷಸನಿಂದಾಗಿ ಈ ಹೆಸರು ಬಂದಿತೆಂದು ಹೇಳಲಾಗಿದೆ. ಪ್ರಾಕೃತದಲ್ಲಿ 'ಕನ್ನಾಡ' ಎಂಬ ರೂಪ ಬಳಕೆಯಾಗಿದೆ.

ಕನ್ನಡ ನಾಡಿನ ಬಗ್ಗೆ ತಮಿಳಿನ ಗ್ರಂಥಗಳಲ್ಲಿಯೂ ಆಧಾರಗಳು ದೊರೆಯುತ್ತವೆ. ತಮಿಳು ಭಾಷೆಯ ಅತ್ಯಂತ ಪ್ರಾಚೀನ ಗ್ರಂಥವಾದ ಶಿಲಪ್ಪದಿಗಾರಂನಲ್ಲಿ ಚೇರ ರಾಜನು ನೀಲಗಿರಿಯಲ್ಲಿ 'ಕರುನಾಡರ್' ಆಡಿದ ಕುಣಿತ ನೋಡಿದನೆಂದಿದೆ. ಪಾಂಡ್ಯ ರಾಜನ ವೇಳ್ವಿಕುಡಿ ತಾಮ್ರಶಾಸನದಲ್ಲಿ ಕರುನಾಡಗನ್ ಎಂಬ ಶಬ್ದವಿದೆ.(ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ– ಎಂ.ಎಚ್.ಕೃಷ್ಣಯ್ಯ: ಪು–೪೪) ಹೀಗೆ ಮೊದಲು ಪ್ರದೇಶವಾಚಕವಾಗಿ, ಜನಾಂಗವಾಚಕವಾಗಿ ಅನಂತರ ಭಾಷಾ ಸೂಚಕವಾಗಿ ಕರ್ನಾಟಕ ಶಬ್ದ ರೂಢಿಯಲ್ಲಿತ್ತು. ಈ ಎಲ್ಲಾ ಅಂಶಗಳಿಂದ ಕ್ರಿ.ಪೂ. ದಿಂದಲೂ ಕನ್ನಡ ಪ್ರದೇಶ ಅಸ್ಥಿತ್ವದಲ್ಲಿತ್ತು ಎಂಬುದು ಸ್ಪಷ್ಟವಾಗುತ್ತದೆ.

**ಕನ್ನಡ, ಕನ್ನಡ ನಾಡು, ಕರ್ಣಾಟಕ– ಪದದ ನಿಷ್ಪತ್ತಿ.**

'ಕರ್ಣಾಟ' ಎಂಬ ಶಬ್ದದ ವ್ಯುತ್ಪತ್ತಿಯ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಕೇಶವವರ್ಣಿ(೧೩೫೯) ಎಂಬ ಜೈನ ಪಂಡಿತನು ಭೇದನಾರ್ಥಕವಾದ 'ಕರ್ಣ' ಧಾತುವಿನಿಂದ 'ಕರ್ಣಾಟ' ಹುಟ್ಟಿತೆಂದು ಭಾವಿಸಿ ದಿವ್ಯ ಭಾಷೆಯಿಂದ ಬೇರೆಯಾಗಿ ವ್ಯವಹಾರದಲ್ಲಿರುವ ಭಾಷೆಯಾದ ಕಾರಣ ಇದಕ್ಕೆ 'ಕರ್ಣಾಟ' ಎಂಬ ಹೆಸರು ಬಂದಿತೆಂದು

ಹೇಳುತ್ತಾನೆ. ವೆಂಕಟಾಧ್ವರಿಯವರು ವಿಶ್ವಗುಣಾದರ್ಶ ಎಂಬ ಗ್ರಂಥದಲ್ಲಿ ಕರ್ಣಗಳಲ್ಲಿ ಅಟನ ಮಾಡುವುದರಿಂದ ಇದಕ್ಕೆ 'ಕರ್ಣಾಟ' ಎಂಬ ಹೆಸರುಂಟಾಯಿತೆಂದು ಹೇಳುತ್ತಾರೆ. ಆದರೆ ಈ ವ್ಯಾಖ್ಯಾನವು ಅಷ್ಟೊಂದು ಸಮಂಜಸವಾಗಿರದೆ ಕೇವಲ ಕವಿಕಲ್ಪನೆಯೆಂದು ಹೇಳಬಹುದು. ಕರ್ಣಾಟ ಎಂಬ ಶಬ್ದದಿಂದ ಕನ್ನಡ ಶಬ್ದ ಬಂದಿರುವ ಬದಲಿಗೆ ತಮಿಟ್> ದ್ರಾವಿಡವಾದ ಹಾಗೆ ಕನ್ನಡವೇ ಕರ್ಣಾಟವಾಗಿರಬೇಕು. ಅಂದರೆ ಕನ್ನಡ ಶಬ್ದದ ಸಂಸ್ಕೃತೀಕರಣ ಕರ್ಣಾಟ ಎನ್ನಬಹುದು. ಕರುನಾಡು>ಕರ್ನಾಡು>ಕರ್ಣಾಡು>ಕರ್ಣಾಟ (ಸಂಸ್ಕೃತದಲ್ಲಿ ರೇಫೆ ಇದ್ದಾಗ ನ–ಣ ಆಗುತ್ತದೆ) ಎಂದು ಆಗಿರಬೇಕೆಂದು ಹೇಳಿದ್ದಾರೆ. ತಮಿಳಿನಲ್ಲಿ ಕರುನಾಡು, ಕರುನಾಡರ್ ಶಬ್ದಗಳಿವೆ. ಕರ್+ನಾಡು+ಅಗಂ >ಕರ್ನಾಡಗಂ>ಕರ್ನಾಟಕ ಎಂದಾಗಿರಬಹುದೆಂದು ವಿದ್ವಾಂಸರು ಊಹಿಸಿದ್ದಾರೆ.

'ಕರುನಾಡಿನ' ವ್ಯುತ್ಪತ್ತಿ ಬಗ್ಗೆ ವಿದ್ವಾಂಸರಲ್ಲಿ ಹಲವಾರು ಅಭಿಪ್ರಾಯಗಳಿವೆ. "ಆರ್.ನರಸಿಂಹಾಚಾರ್‌ರವರು ಕಮ್ಮಿತ್ತು+ನಾಡು=ಕನ್ನಾಡು ಎಂದು ವಿವರಿಸಿದ್ದಾರೆ. ಕಮ್ಮಿತ್ತು ಎಂದರೆ ಸುವಾಸನೆ, ಪರಿಮಳ ಎಂಬ ಅರ್ಥಗಳನ್ನೊಳಗೊಂಡಿದ್ದು ಕನ್ನಾಡು>ಕನ್ನಡು>ಕನ್ನಡ ಹೀಗೆ ಕನ್ನಡ ಪದದ ನಿಷ್ಪತ್ತಿ ಕುರಿತು ಹೇಳಿದ್ದಾರೆ.

ಕಮ್ಮಿತಾದುದು ನಾಡು ನುಡಿಯಿಂ ಕಮ್ಮಿತಾದುದು ನಾಡು ನುಡಿಯಿಂ
ಕಮ್ಮಿತಾದುದು ಚಂದನೋವಿರುಹದಿನೀ ನಾಡು
ಕಮ್ಮಿತಾದುದು ಕಮ್ಮಯಿಸುವಾ। ಕಮ್ಮರಲ್ಗಳಿನಿನಿತು ಕಂಪಿ
ಕಮ್ಮಿ ತಲ್ಲದೆ ಕರ್ಪು ಕನ್ನಡಕೆಂತು ಸಮನಿಸಿತು

(ಕನ್ನಡ ಭಾಷಾ ಸ್ವರೂಪ–ಕೆ.ಎಂ.ಕೃಷ್ಣರಾವ್: ಪು–೬೯)

ಆದರೆ ಕನ್ನಾಡು ಎಂಬ ಶಬ್ದ ಎಲ್ಲಿಯೂ ಕಾಣಸಿಗುವುದಲ್ಲ ಮತ್ತು ಉಲ್ಲೇಖಗೊಂಡಿಲ್ಲ. ಶಂ.ಬ.ಜೋಶಿಯವರು ಕನ್ನಡದ 'ಕನ್' ಎಂಬುದು ಜನಾಂಗವಾಚಿ, ಮನುಸ್ಮೃತಿ, ಮತ್ಸ್ಯಪುರಾಣಗಳ 'ಕರ್ಣ'ರು 'ಕನ್' ಜನಾಂಗದವರು. ವೇದಗಳ 'ಕಳವರು' ಕನ್ನಡದ ಪೂರ್ವಜರು, ಮೂಲದ್ರಾವಿಡರು. ಕನ್ನರು ಮೂಲಕನ್ನಡಿಗರು. ಕನ್ ಜನಾಂಗದ ನಾಡು ಕನ್ನಡ. ಆದರೆ 'ಕನ್' 'ಕರ್ಣ' ಹೇಗಾಯಿತು ಎಂಬುದಕ್ಕೆ ಇವರು ಏನೂ ಹೇಳಿಲ್ಲ. ಎಂ.ಗೋವಿಂದ ಪೈರವರು ಕರು+ನಾಡು ಎಂದರೆ ದೊಡ್ಡ ದೇಶ ಎಂದು ಹೇಳುತ್ತಾರೆ. ಹತ್ತಂಗಡಿ ನಾರಾಯಣರಾಯರು ಕರು+ನಾಡು ಎಂದರೆ ಎತ್ತರದ ಪ್ರದೇಶ ಎನ್ನುತ್ತಾರೆ.

ಕರ್ನಾಟಕ ಸಮುದ್ರ ಮಟ್ಟಕ್ಕಿಂತ ಎತ್ತರದಲ್ಲಿದೆ. ಉಪ್ಪರಿಗೆ ಮನೆಗೆ ಕರುಮಾಡ ಎನ್ನುವಂತೆ ಕರು+ನಾಡಿನ 'ಕರು' ಪದದ ಅರ್ಥವನ್ನು ಗುರುತಿಸಿದ್ದಾರೆ".

ಗುಂಡರ್ಟ್ ಮತ್ತು ಕಾಲ್ಡ್‌ವೆಲ್‌ರವರು ಕರ್+ನಾಡು ಎಂದರೆ ಕಪ್ಪುಮಣ್ಣಿನ ನಾಡು ಎಂದು ಹೇಳಿದ್ದು, ಇಲ್ಲಿಯ ಭೂಮಿ ಹತ್ತಿಯ ಬೆಳೆಗೆ ಹೆಸರಾದದ್ದು ಎಂದಿದ್ದಾರೆ. ಎಂ.ಎಚ್.ಕೃಷ್ಣರವರು ಕರುನಾಡು ಎಂದು ಕರೆದದ್ದು ತಮಿಳರು, ಆದರೆ ಕನ್ನಡಿಗರು ತಮ್ಮ ನಾಡನ್ನು ಏನೆಂದು ಕರೆದುಕೊಳ್ಳುತ್ತಿದ್ದರು ಎಂಬುದು ಇದರಿಂದ ಸ್ಪಷ್ಟವಾಗುವುದಿಲ್ಲ ಎನ್ನುತ್ತಾರೆ. ಪ್ರ.ಗೋ.ಕುಲಕರ್ಣಿಯವರು ಪರ್ವತ(ಮಲೆ)ಗಳ ಪ್ರದೇಶ ಮಲೆಯಾಳ; ಮೈದಾನ, ಬಯಲು ಪ್ರದೇಶ ತಮಿಳು(ತಿಱವೀಡು> ತಿಱಮೀಡ >ತಿಱಮಿಳ>ತಮಿಳ ಎಂದು ಹೇಳಿದ್ದಾರೆ)ನಾಡು, ನೀಲಗಿರಿಯಿಂದ ಗೋದಾವರಿವರೆಗಿನ ಸಾನು(ಕರು) ಪ್ರದೇಶವು ಕರುನಾಡು ಎಂಬುದಾಗಿ ಹೇಳಿದ್ದಾರೆ. ಕನ್ನಡ ಪ್ರದೇಶದ ಬಗ್ಗೆ ಮಹಾಭಾರತದ ಸಭಾಪರ್ವ ಹಾಗೂ ಭೀಷ್ಮಪರ್ವಗಳಲ್ಲಿ ಕರ್ಣಾಟ ಪದದ ಉಲ್ಲೇಖವಿದೆ. ಭಟ್ಟಾಕಳಂಕನೂ, ಕೇಶಿರಾಜನೂ ಕನ್ನಡ ಎಂಬುದು ಕರ್ಣಾಟ ಎಂಬುದರ ಅಪಭ್ರಂಶವೆಂದು ಹೇಳಿದ್ದಾರೆ. ಇದರ ಜೊತೆಗೆ ಕರ್ಣಾಟ ಎಂಬುದು ಕನ್ನಡ ಎಂಬ ಮೂಲ ಪದದ ಸಂಸ್ಕೃತ ರೂಪವೆಂದು ಹೇಳಲಿಕ್ಕೂ ಅವಕಾಶವುಂಟೆಂದು ಹಲವಾರು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

ಹೀಗೆ ಕನ್ನಡ ಹಾಗೂ ಕರ್ನಾಟಕ ಕುರಿತ ಹಲವು ಅಭಿಪ್ರಾಯಗಳನ್ನು ಕಾಣಬಹುದು. ಆದರೆ ಇಂದಿಗೂ ಈ ವಿಷಯ ಕುರಿತ ಒಮ್ಮತ ಅಭಿಪ್ರಾಯವಿಲ್ಲ.

### ಕನ್ನಡ ಭಾಷೆಯ ಪ್ರಾಚೀನತೆ

ಕನ್ನಡ ಭಾಷೆಯ ಪ್ರಾಚೀನತೆಯನ್ನು ತಿಳಿಯಲು ಮಹಾಭಾರತದ ಹಿನ್ನಲೆಯಲ್ಲಿ ನೋಡಿದಾಗ ಈ ಗ್ರಂಥ ಸುಮಾರು ಕ್ರಿ.ಪೂ.೩ನೇ ಶತಮಾನದಲ್ಲಿ ಪೂರ್ಣಗೊಂಡಿರಬಹುದಾಗಿದ್ದು ಕನ್ನಡ ಭಾಷೆ ಆ ಕಾಲಕ್ಕಾಗಲೇ ಪ್ರಚಾರದಲ್ಲಿರಬೇಕೆಂದು ಊಹಿಸಲಾಗಿದೆ. ಆದರೆ ಕನ್ನಡ ಭಾಷೆ ಮೂಲ ದ್ರಾವಿಡದಿಂದ ಯಾವ ಕಾಲದಲ್ಲಿ ಕವಲೊಡೆಯಿತು ಮತ್ತು ಸ್ವತಂತ್ರವನ್ನು ಪಡೆಯಿತು ಎಂಬುದು ತಿಳಿಯುವುದಿಲ್ಲ. ಒಂದು ಭಾಷೆ ಗ್ರಂಥಸ್ಥವಾದಾಗಲೇ ದಾಖಲೆಗಳ ಆಧಾರ ದೊರೆಯುವುದು. ಆದ್ದರಿಂದ ಕನ್ನಡ ಭಾಷೆಯ ಪ್ರಾಚೀನತೆಯನ್ನು ಶಾಸನ ಹಾಗೂ ಶಾಸನೇತರ ಆಧಾರಗಳಿಂದ

ತಿಳಿಯಬಹುದಾಗಿದೆ. ಆದರೆ ಈ ಆಧಾರಗಳಿಂದ ಕನ್ನಡದ ಪ್ರಾಥಮಿಕ ಅವಸ್ಥಾಂತರವಂತೂ ತಿಳಿಯುವುದಿಲ್ಲ.

ಹರಪ್ಪಾ-ಮೆಹೆಂಜದಾರೋ ಸಂಸ್ಕೃತಿಗೆ ಸೇರಿದ ಮುದ್ರಿಕೆಗಳಲ್ಲಿ ಕನ್ನಡದ ಉಲ್ಲೇಖವಿದೆಯೆಂದೂ, ಅವರು 'ಕಣನಿರ್' ಜನಾಂಗದವರೆಂದೂ ಹೆರಾಸ್ ಹೇಳಿದ್ದಾರೆ. ಆದರೆ ಹರಪ್ಪಾ ಲಿಪಿಯನ್ನು ಓದಲು ಇನ್ನೂ ಯಾರಿಂದಲೂ ಸಾಧ್ಯವಾಗಿಲ್ಲ. ಇದು ಅವರ ಊಹೆ ಮಾತ್ರವಾಗಿದೆ.

ಛಾಂದೋಗ್ಯ ಉಪನಿಷತ್ತಿನಲ್ಲಿ ಚೆನ್(ಚಂದ್ರ), ಮಿಟಚಿ(ಮಿಡತೆ) ಶಬ್ದಗಳು ಸಿಗುತ್ತವೆ. ಟಾಲೆಮಿ ಕೂಡ ತನ್ನ ಗ್ರಂಥದಲ್ಲಿ ಪ್ರಾಚೀನ ಭಾರತದ ಸ್ಥಳಗಳನ್ನು ಹೇಳಿದ್ದಾನೆ. ಅವುಗಳಲ್ಲಿ ಕೆಲವು ಕನ್ನಡ ಪ್ರದೇಶದ ಸ್ಥಳಗಳೆಂದು ಗೋವಿಂದ ಪೈ ಗುರುತಿಸುತ್ತಾರೆ. Tadaso ಅಥಣಿ ತಾಲ್ಲೂಕಿನ ತವಸಿ, Inde ಬಿಜಾಪುರದ ಇಂಡಿ, Hippokoura ಹೂವಿನ ಹಿಪ್ಪರಿಗೆ, Modugoula ರಾಯಚೂರಿನ ಮುದ್ಗಲ, Soubouttou ಸವದಿ, ಬಾದಿಯಾಮೊಯಿ (ಬಾದಾಮಿ), ಪೌನ್ನಾಟ (ಪುನ್ನಾಟ- ಕರ್ನಾಟಕದ ಒಂದು ಭಾಗ ವಜ್ರ ವೈಢೂರ್ಯಕ್ಕೆ ಖ್ಯಾತವಾಗಿತ್ತು), ಬನವಾಸೈ(ಬನವಾಸಿ) ಇತ್ಯಾದಿ.

ಕನ್ನಡ ಸಾಹಿತ್ಯಕ್ಕೆ ಬೌದ್ಧ ಮೂಲ ಹುಡುಕುವ ಪ್ರಯತ್ನವೂ ನಡೆದಿದೆ. ಕ್ರಿ.ಶ. ೪-೫ನೇ ಶತಮಾನದಿಂದಲೂ ಕನ್ನಡದಲ್ಲಿ ಬೌದ್ಧ ಗ್ರಂಥಗಳು ರಚನೆಯಾಗಿರಬೇಕು. ಅವು ನಾಶವಾಗಿರಬೇಕು ಎಂಬ ಅಭಿಪ್ರಾಯವಿದೆ. ಕರ್ನಾಟಕಕ್ಕೆ ಬೌದ್ಧರ ಸಂಪರ್ಕವಿದ್ದಿತೆಂಬುದಕ್ಕೆ ಕ್ರಿ.ಪೂದ ಅಶೋಕನ ಶಾಸನಗಳು ಬ್ರಹ್ಮಗಿರಿ, ಜಟಿಂಗ ರಾಮೇಶ್ವರ, ಎಮ್ಮೆತಮ್ಮನ ಗುಡ್ಡಗಳಲ್ಲಿ ದೊರೆತಿದ್ದು, ಈ ಪ್ರದೇಶಗಳು ಸುವರ್ಣಗಿರಿ ಪ್ರಾಂತಕ್ಕೆ ಸೇರಿವೆ. ಇದರ ರಾಜಧಾನಿ 'ಇಸಿಲ' ಎಂಬುದಾಗಿತ್ತು. ಆದರೆ ಕನ್ನಡ ವ್ಯವಹಾರ ಭಾಷೆಯಾಗಿತ್ತೆ ಎಂಬುದು ತಿಳಿಯುವುದಿಲ್ಲ.

"ಕ್ರಿ.ಪೂ ೧ನೇ ಶತಮಾನದಿಂದ ಕ್ರಿ.ಶ ೧ನೇ ಶತಮಾನದಲ್ಲಿದ್ದನೆನ್ನಲಾದ ಶಾತವಾಹನ ವಂಶದವನಾದ ಹಾಲರಾಜನು ರಚಿಸಿದ ಪ್ರಾಕೃತದ 'ಗಾಥಸಪ್ತಶತಿ' ಕಾವ್ಯದಲ್ಲಿ ಪೊಟ್ಟ(ಹೊಟ್ಟೆ), ತುಪ್ಪ, ಪೆಟ್ಟು(ಹೊಡೆ), ತೀರ್(ಸಮರ್ಥನಾಗು), ರೊಟ್ಟಿ, ಉರೋ(ಊರು) ಮುಂತಾದ ಕನ್ನಡ ಶಬ್ದಗಳು ದೊರೆತಿವೆ. ಪ್ರಾಕೃತ ಆಡಳಿತ, ವ್ಯವಹಾರ ಭಾಷೆಯಾಗಿದ್ದ ಆ ಕಾಲದಲ್ಲಿ ಕನ್ನಡ ಸಾಮಾನ್ಯ ಜನರ ಭಾಷೆಯಾಗಿದ್ದಿರಬೇಕು. ಆದ್ದರಿಂದ ಸ್ಥಳೀಯ ಭಾಷೆಯ ಶಬ್ದಗಳು ಪ್ರಾಕೃತದಲ್ಲೂ ಬೆರೆತು ಗ್ರಂಥದಲ್ಲೂ ಕಾಣಿಸಿಕೊಂಡಿರಬೇಕು ಎಂದು ಗೋವಿಂದಪೈ ಮತ್ತು ಇತರ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ".

'ಈಜಿಪ್ಟಿನ ಆಕ್ಸಿರಿಂಕಸ್' ಎಂಬಲ್ಲಿ ದೊರೆತ ಪ್ಯಾಪಿರೈಗಳಲ್ಲಿ ಒಂದು ಗ್ರೀಕ್ ಪ್ರಹಸನವೂ ಸೇರಿದೆ. ಶಾಮಾಶಾಸ್ತ್ರಿಗಳು ಊಹಿಸಿರುವಂತೆ ಇದರಲ್ಲಿ ಬರುವ ಸಂಭಾಷಣೆಯ ಕೆಲವು ಮಾತುಗಳು ಗ್ರೀಕ್ ಭಾಷೆಯವಲ್ಲ, ಅವು ಕನ್ನಡದ ಶಬ್ದಗಳೆಂದಿದ್ದಾರೆ. ಆದರೆ ಎಸ್.ಶ್ರೀಕಂಠಯ್ಯನವರು ಅವು ತಮಿಳೂ ಆಗಿರಬಹುದು, ಖಚಿತವಾಗಿ ಕನ್ನಡ ಎನ್ನುವಂತಿಲ್ಲ ಎಂದಿದ್ದಾರೆ. ಇತ್ತೀಚೆಗೆ ಅದು ತುಳುವಾಗಿರಬಹುದೆಂದು ಊಹಿಸಲಾಗಿದೆ. ಇದರಲ್ಲಿ ಮಲ್ಪಿನಾಯಕ ಎಂಬ ಶಬ್ದ ಉಲ್ಲೇಖವಾಗಿದೆ. ಈ ಪ್ರಹಸನದ ಕಾಲ ಕ್ರಿ.ಶ.೧೫೦. ಇದರಲ್ಲಿ ಗುರುತಿಸಿರುವ ಕನ್ನಡ ಶಬ್ದಗಳೆಂದರೆ Minei–ಮೀನಾ, Alemaka–ಅಲ್ಲೆಮಕ್ಕ, Arminthi–ಆರ್‌ಮಿಂದ್ಯೆ,, Skalmakata–ಕಳ್‌ಮಕತಾ, Malpiniak–ಮಲ್ಪಿನಾಯಕ್, Zabede–ಹಬ್ಬದ ಎಡೆ.

ಕ್ರಿ.ಪೂ.೩ನೇ ಶತಮಾನದ ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ 'ಇಸಿಲ' ಎಂಬ ಪದವಿದ್ದು, ಇದು ಊರಿನ ಹೆಸರಾಗಿದ್ದು, ಕರ್ನಾಟಕದಲ್ಲಿತ್ತು ಎಂದು ಡಿ.ಎಲ್.ನರಸಿಂಹಾಚಾರ್‌ರವರು ಹೇಳುತ್ತಾರೆ. 'ಇಸಿಲ'ದ ಜ್ಞಾತಿಪದ ಎಸಿಲ್ ಎಂದಿರಬೇಕು, ತಮಿಳಿನ ಎಯಿಲ್ ಅಥವಾ ಎಯಿಲಂ ಕನ್ನಡದಲ್ಲಿ ಎ>ಇ ಆಗಿ, ಯಿ>ಸಿಯಾಗಿ ಇಸಿಲ ಎಂದಾಗಿರಬೇಕು. ತಮಿಳಿನಲ್ಲಿ ಎಯಿಲ್ ಎಂದರೆ ಕೋಟೆಯುಳ್ಳ ಅಥವಾ ಕೋಟೆಯೊಳಗಿನ ಊರು ಎಂದರ್ಥ. ಆದ್ದರಿಂದ ದಾಖಲಾಗಿರುವ ಪ್ರಾಚೀನ ಕನ್ನಡ ಶಬ್ದ ಇದಾಗಿದೆ.

ಮಾಧವಪುರ ಶಾಸನದಲ್ಲಿ (ಕ್ರಿ.ಪೂ.೧ನೇ ಶ) 'ನಾಟಪತಿ' ಎಂಬ ಶಬ್ದವಿದೆ. ಅದರಲ್ಲಿ 'ನಾಟ'ವು 'ನಾಡು' ಎಂಬುದರ ಪ್ರಾಚೀನ ರೂಪ. ಕ್ರಿ.ಶ.೨ನೇಶ.ದ ಶಾತವಾಹನರ ಮಳವಳ್ಳಿ ಶಾಸನದಲ್ಲಿ 'ಅಂಬಲೀವ ಊರ' ಎಂಬ ಶಬ್ದವಿದೆ. ಅಲ್ಲಿಯ ಊರ ಖಚಿತವಾಗಿ ಕನ್ನಡ. ಕ್ರಿಶ ೨ ರಿಂದ ೪ನೇ ಶತಮಾನದವರೆಗಿನ ಶಾಸನಗಳಲ್ಲಿ ಕೋಟ್ಟ, ಆಪಿಟ್ಟಿ, ವಟ್ಟಕ್ಕಿ, ವೇಗೂರಂ, ಕುಂದಮುಚ್ಚುಂಡಿ ಶಬ್ದಗಳಿವೆ. ಇವು ಕನ್ನಡ ದ್ರಾವಿಡದಿಂದ ಕವಲೊಡೆದು ಪ್ರತ್ಯೇಕ ಭಾಷೆಯಾಗಿತ್ತೆಂಬುದನ್ನು ಸೂಚಿಸುತ್ತವೆ. ಕ್ರಿ.ಶ.೨ನೇ ಶ.ದ ಬೌದ್ಧ ಗ್ರಂಥ 'ಲಲಿತ ವಿಸ್ತರ'ದಲ್ಲಿ 'ಕನಾರಿ' ಎಂಬ ಲಿಪಿಯ ಹೆಸರು ಉಕ್ತವಾಗಿದೆ. ಹಲ್ಮಿಡಿ ಶಾಸನಕ್ಕೆ ಎರಡು–ಮೂರು ಶತಮಾನಗಳಷ್ಟಾದರೂ ಹಿಂದೆ ಕನ್ನಡ ಗ್ರಾಂಥಿಕ ಭಾಷೆಯಾಗಿದ್ದಿರಬೇಕೆಂದು ಊಹಿಸಬಹುದು. ಹಲ್ಮಿಡಿ ಶಾಸನ ಮತ್ತು ನಂತರದಲ್ಲಿ ದೊರೆತ ಶಾಸನಗಳು ಸಂಸ್ಕೃತ

ಭಾಷೆಯ ಮಿಶ್ರಣದಲ್ಲಿ ದೊರೆಯುತ್ತವೆ. ಒಟ್ಟಿನಲ್ಲಿ ಮೇಲೆ ಗುರುತಿಸುವಂತೆ ಕನ್ನಡ ಭಾಷೆಯ ಅಸ್ಥಿತ್ವ ಕ್ರಿ.ಪೂ.ಕ್ಕೆ ಹೋಗುತ್ತದೆ.

ಆದರೆ ಸಧ್ಯಕ್ಕೆ ದೊರೆತಿರುವ ಆಧಾರಗಳನ್ನು ಖಚಿತವಾಗಿ ಕನ್ನಡದವೆಂದು ಹೇಳಲು ಸಾಧ್ಯವಾಗಿಲ್ಲ. ಕೇವಲ ಊಹೆಯ ಕುದುರೆಯನೇರಿ ಸವಾರಿಯ ಕನಸುಕಂಡಂತಾಗಿದೆ. ಈ ಕುರಿತಾದ ಅಧ್ಯಯನ ಸಾಕಷ್ಟು ನಡೆಯ ಬೇಕಾಗಿರುವುದರಿಂದ ಕನ್ನಡ ಭಾಷೆಯ ಇತಿಹಾಸದ ಬಗ್ಗೆ ಮತ್ತು ಉಗಮದ ಬಗ್ಗೆ ಸ್ಪಷ್ಟ ನಿರ್ಧಾರ ತೆಗೆದುಕೊಳ್ಳಲು ಸಾಧ್ಯವಿಲ್ಲ.

ಅಧ್ಯಾಯ.೪

# ಕನ್ನಡ ಲಿಪಿ

'ಭಾಷೆ' ಯಾದೃಚ್ಛಿಕವಾದದ್ದು. ಇದು ತನ್ನ ಸ್ವರೂಪದಲ್ಲಿ ಸದಾ ಬದಲಾವಣೆಯನ್ನು ಹೊಂದುತ್ತಲೇ ಇರುತ್ತದೆ. ಹೀಗೆ ಬದಲಾಗುವುದು ಜೀವಂತ ಭಾಷೆಯ ಲಕ್ಷಣ. ಒಂದು ಭಾಷೆ ಒಂದಲ್ಲ ಒಂದು ಕಾರಣಕ್ಕೆ ಬದಲಾಗುವುದು ಸರ್ವೆಸಾಮಾನ್ಯ. ಈ ಕ್ರಿಯೆಯನ್ನು 'ಭಾಷಿಕ ಪರಿವರ್ತನೆ' ಎನ್ನುತ್ತಾರೆ.

ಯಾವುದಾದರೊಂದು ಭಾಷೆಯ ಎರಡು ಅಥವಾ ಎರಡಕ್ಕಿಂತ ಹೆಚ್ಚು ಅವಸ್ಥೆಗಳನ್ನು ಪರಸ್ಪರ ಹೋಲಿಸಿದಾಗ ಕಾಲದಿಂದ ಕಾಲಕ್ಕೆ ವ್ಯತ್ಯಾಸ ಹೊಂದುತ್ತಾ ಬೆಳೆದು ಬಂದ ಚರಿತ್ರೆಯು ತಿಳಿದುಬರುತ್ತದೆ. ಒಂದು ಭಾಷೆ ಜೀವಂತ ಭಾಷೆಯಾಗಿದ್ದು ಜನಪದದ ಆಡು ಭಾಷೆಯೂ ಆಗಿರುವಾಗ ಅವಸ್ಥಾಂತರಗಳನ್ನು ಪಡೆದುಕೊಳ್ಳುವುದು ತೀರಾ ಸಾಮಾನ್ಯ. ಬಳಕೆಯಲ್ಲಿರುವ ಭಾಷೆ ತನ್ನ ಸುತ್ತ ಮುತ್ತಲ ಭಾಷೆಗಳಿಂದ ಅನೇಕ ಶಬ್ದಗಳನ್ನು ಸ್ವೀಕರಿಸುತ್ತಾ ಹೋಗುವುದು ಸ್ವಾಭಾವಿಕ. ಇದರಿಂದ ಭಾಷೆಯ ವಿವಿಧ ಅಂಶಗಳು ಕಾಲಕಾಲಕ್ಕೆ ಬದಲಾಗುತ್ತಾ ಹೋಗುತ್ತವೆ. ಹಾಗೆಯೇ ಭಾಷೆಯಲ್ಲಿ ಹೊಸಹೊಸ ಶಬ್ದಗಳು ನಿರ್ಮಾಣವಾಗುತ್ತಲೂ ಇರುತ್ತವೆ. ಈ ಬಗೆಯ ಶಬ್ದ ಸೃಷ್ಟಿ ಭಾಷೆಯಲ್ಲಿ ವ್ಯತ್ಯಾಸಕ್ಕೆ ಕಾರಣವಾಗುತ್ತದೆ. ಹೀಗೆ ಕಾಲಕ್ಕನುಗುಣವಾಗಿ ಭಾಷೆಯಲ್ಲಾದ ವ್ಯತ್ಯಾಸವನ್ನು ತಿಳಿಯಲು ಲಿಖಿತ ರೂಪದ ಆಧಾರಗಳಿಂದ ಮಾತ್ರ ಸಾಧ್ಯ. ಉದಾಹರಣೆಗೆ ಕನ್ನಡ ಭಾಷೆಯ ಅವಸ್ಥಾಂತರವನ್ನು ತಿಳಿಯಲು ಹಲ್ಮಿಡಿ ಶಾಸನದಿಂದ ಹಿಡಿದು ಇತ್ತೀಚಿನ ಎಲ್ಲಾ ಶಾಸನಗಳೂ, ಎಲ್ಲಾ ಕೃತಿಗಳೂ ಸಹಾಯಕವಾಗಿವೆ. ಆದರೆ ಹಲ್ಮಿಡಿ ಶಾಸನಕ್ಕೆ ಮುಂಚೆ ಇಲ್ಲವೆಂದೋ, ಇದೆಯೆಂದೋ ಹೇಳಲಾದ ಆ ಭಾಷೆಗೆ ಲಿಪಿ ಇತ್ತೋ, ಇಲ್ಲವೋ ಎಂಬುದು ಸ್ಪಷ್ಟವಾಗಿ ಇನ್ನೂ ತಿಳಿದಿಲ್ಲ. ಇದರ ಜೊತೆಗೆ ಒಂದು ಭಾಷೆಯ ಲಿಪಿಯಲ್ಲಿ ಆಗಿರುವಂತಹ ಬದಲಾವಣೆ ಕೂಡ ಭಾಷೆಯ ಅವಸ್ಥಾಂತರಗಳನ್ನು ಗುರುತಿಸಲು ಪ್ರಮುಖವಾಗುತ್ತದೆ.

## ಕನ್ನಡ ಲಿಪಿಯ ಉಗಮ

ಕೇಶಿರಾಜಾದಿಗಳು ಅಕ್ಷರಕ್ಕೆ ಶ್ರಾವಣ ಮತ್ತು ಚಾಕ್ಷುಷ ಎಂದು ಎರಡು ರೂಪಗಳಿವೆ ಎಂದು ಹೇಳಿದ್ದಾರೆ.

ವ್ಯವಹರಿಪುವೆರಡು ರೂಪಿಂ
ದವಕ್ಕರಂ ಶ್ರಾವಣ, ತ್ವನ್ಯೆಕಾಕಾರರಂ
ವಿವಿಧಾಕಾರಂ ಲಿಪಿಭೇ
ದ ವೃತ್ತಿಯಿಂ ಚಾಕ್ಷುಷಂ ಪುರಾತನ ಮತದಿಂ।

ಅಕ್ಷರಕ್ಕೆ 'ಶ್ರಾವಣ' ಎಂದರೆ ಕಿವಿಗೆ ಕೇಳುವುದು ಹಾಗೂ 'ಚಾಕ್ಷುಷ' ಎಂದರೆ ಕಣ್ಣಿಗೆ ಕಾಣುವುದು ಎಂಬ ಎರಡು ರೂಪಗಳಿವೆ. ಇವುಗಳಲ್ಲಿ ಎಲ್ಲಾ ಭಾಷೆಯ ಶ್ರಾವಣ ಸ್ವರೂಪ ಏಕಾಕಾರವಾಗಿದೆ. ಆದರೆ ಲಿಪಿ ಬೇರೆ ಬೇರೆಯಾಗಿರುವುದರಿಂದ ಚಾಕ್ಷುಷ ವಿವಿಧಾಕಾರವಾಗಿದೆ. ಶ್ರಾವಣ ಹಾಗೂ ಚಾಕ್ಷುಷಗಳಲ್ಲಿ ಈ ಒಂದು ಅಂತರವಲ್ಲದೆ ಭಾಷೆಯ ಶ್ರಾವಣ ಸ್ವರೂಪದ ವ್ಯಾಪ್ತಿ ಪರಿಮಿತವಾಗಿದೆ. ಆದರೆ ಚಾಕ್ಷುಷ ಅಥವಾ ಲಿಪಿ ರೂಪದ ವ್ಯಾಪ್ತಿ ನಿರಂತರವಾಗಿದೆ. ಅಂದರೆ ನಾವು ಒಬ್ಬ ವ್ಯಕ್ತಿಯೊಡನೆ ಮಾತನಾಡಿದ್ದು ಅದು ಆ ಕ್ಷಣಕ್ಕೆ ಮತ್ತು ಆ ಸ್ಥಳದಲ್ಲಿ ನಮ್ಮೆದುರಿಗೆ ಇರುವವರಿಗೆ ಮಾತ್ರ ಸಲ್ಲುತ್ತದೆ. ಇತರರಿಗೆ ಇಲ್ಲವೆ ನಮ್ಮಿಂದ ದೂರವಿರುವವರಿಗೆ ತಲುಪುವುದಿಲ್ಲ. ಆದರೆ ಅದೇ ಮಾತು ಲಿಪಿಬದ್ಧವಾದಾಗ ಚಾಕ್ಷುಷ ರೂಪದ ವ್ಯಾಪ್ತಿ ವಿಸ್ತಾರವಾಗುತ್ತದೆ ಹಾಗೂ ನಿರಂತರವಾಗಿರುತ್ತದೆ. ನಾವು ಒಂದು ಸಲ ಏನನ್ನಾದರು ಬರೆದುಬಿಟ್ಟರೆ ಆ ಕಾಲಕ್ಕೆ ಮತ್ತು ಆ ಸ್ಥಳಕ್ಕೆ ಮಾತ್ರ ಸೀಮಿತವಾಗಿರುತ್ತದೆ. ಅದು ಸದಾ ಕಾಲಕ್ಕೂ ಸರ್ವರೂ ತಿಳಿದುಕೊಳ್ಳಲು ಸಹಾಯಕವಾಗುತ್ತದೆ. ಉದಾಹರಣೆಗೆ ಪಂಪನು ಮಾತಾನಾಡಿದುದರ ಕಲ್ಪನೆ ಇಂದು ನಮಗೆ ದೊರೆಯುವುದಿಲ್ಲ. ಆದರೆ ಪಂಪನ ಕೃತಿಗಳು ಇಂದಿಗೂ ನಮ್ಮ ಕಣ್ಣೆದುರಿಗಿವೆ. ಆದ್ದರಿಂದ ಭಾಷೆಯ ಶ್ರಾವಣದ ವ್ಯಾಪ್ತಿಗಿಂತ ಲಿಪಿಬದ್ಧವಾದ ಚಾಕ್ಷುಷದ ವ್ಯಾಪ್ತಿ ಹೆಚ್ಚು ನಿರಂತರವಾಗಿದೆ.

ಈ ಹಿನ್ನಲೆಯಲ್ಲಿ ಕನ್ನಡದಲ್ಲಿ ಲಿಪಿಯ ಉಗಮ ಎಂದಿನಿಂದ ಪ್ರಾರಂಭವಾಯಿತು? ಅದು ಯಾವ ಮೂಲದಿಂದ ಬಂದಿತು? ಅದು ಹೇಗೆ ವಿಕಾಸವಾಯಿತು? ಎಂಬುದು ಮುಖ್ಯವಾಗುತ್ತದೆ. ಭಾರತದಲ್ಲಿ ಲಿಪಿ ಫ್ರಿನೀಶಿಯನ್ನರಿಂದ ಬಂದಿತೆಂದು ವೀಬರ್ ಮೊದಲಾದ ಪಂಡಿತರು ಹೇಳುತ್ತಾರೆ. ಆದರೆ ಭಾರತೀಯ ಸಾಹಿತ್ಯದಲ್ಲಿಯೇ ದೊರೆಯುವ ಉಲ್ಲೇಖಗಳ ಪ್ರಕಾರ ಭಾರತೀಯರಿಗೆ ಲಿಪಿ ತೀರಾ

ಪ್ರಾಚೀನ ಕಾಲದಿಂದಲೂ ಗೊತ್ತಿತ್ತು ಎಂದು ನಿರ್ವಿವಾದವಾಗಿ ಹೇಳಲು ಹಲವು ಸಾಕ್ಷ್ಯಾಧಾರಗಳು ದೊರೆಯುತ್ತವೆ.

ಷಾಣ್ಮಾಸಿಕೇತು ಸಮಯೋ ಭ್ರಾನ್ತಿಸ್ಸಂಜಾಯತೇಯತಃ

ಧಾತ್ರಾಕ್ಷರಾಣಿ ಸೃಷ್ಟಾನಿ ಪತ್ರರೂಢಾನ್ಯತಃಪುರಾ।

ಭಾರತೀಯ ಜ್ಯೋತಿಶ್ಯಾಸ್ತ್ರದ ಪ್ರಕಾರ ಲಿಪಿಗಳೆಲ್ಲ ಬ್ರಹ್ಮನಿಂದಲೇ ನಿರ್ಮಿತವಾದವು ಎನ್ನಲಾಗಿದೆ. ಯಾಜ್ಞವಲ್ಕ್ಯಸ್ಮೃತಿಯಲ್ಲಿ 'ಕೃತ್ವಾ ಲೇಖ್ಯಂತು ಕಾರಯೇತ್' ಎಂದು ಬರುತ್ತದೆ. ವಾತ್ಸಾಯನ ಸೂತ್ರದ ಮೇರೆಗೆ ಅರವತ್ತು ನಾಲ್ಕು ಕಲೆಗಳಲ್ಲಿ ಪುಸ್ತಕವಾಚಕವೂ ಒಂದಾಗಿದೆ. ಅದೂ ಅಲ್ಲದೆ ಪ್ರತಿಯೊಬ್ಬನ ಮನೆಯಲ್ಲೂ ಪುಸ್ತಕಗಳಿರಬೇಕೆಂದು ಹೇಳಲಾಗಿದೆ. 'ಗೃಹಸಾಮಾಗ್ರಿಷು, ಯಃಕಶ್ಚಿತ್ ಪುಸ್ತಕಃ' ಎಂದು ಪಾಣಿನಿಯು ಹೇಳಿದ್ದಾನೆ. ಈ ಎಲ್ಲಾ ಅಂಶಗಳಿಂದ ಲಿಪಿ ಕುರಿತ ಜ್ಞಾನ ಭಾರತೀಯರಿಗೆ ಪ್ರಾಚೀನ ಕಾಲದಿಂದಲೂ ಇದ್ದದ್ದು ಸ್ಪಷ್ಟವಾಗುತ್ತದೆ.

ಕನ್ನಡ ಲಿಪಿ ಭಾರತದ ಇತರ ಲಿಪಿಗಳಂತೆ ಕ್ರಿ.ಪೂ.೩ನೇ ಶತಮಾನದ ಅಶೋಕನ ಬ್ರಾಹ್ಮೀಲಿಪಿಯಿಂದ ಉಗಮಗೊಂಡಿರುವುದೆಂದು ಹಲವಾರು ವಿದ್ವಾಂಸರು ಅಭಿಪ್ರಾಪಟ್ಟಿದ್ದಾರೆ. ಅಶೋಕನ ಈ ಲಿಪಿ ಉತ್ತರದ ನೇಪಾಳದಿಂದ ದಕ್ಷಿಣದ ಮೈಸೂರಿನವರೆಗೂ ಕಂಡುಬರುತ್ತದೆ. ಈ ಲಿಪಿ ಎಡದಿಂದ ಬಲಕ್ಕೆ ಬರೆಯಲ್ಪಟ್ಟಿದೆ. ಅಶೋಕನ ಬ್ರಾಹ್ಮೀಲಿಪಿಯ ಶಾಸನಗಳು ದೊರೆತ್ತಿದ್ದು, ಗುಲ್ಬರ್ಗ ಜಿಲ್ಲೆಯ ಸನ್ನತಿ ಎಂಬಲ್ಲಿ ದೊರೆತ ಶಾಸನಗಳಲ್ಲಿಯ ಅಕ್ಷರಗಳು ಅಲಂಕಾರಯುತವಾಗಿ ಸುಂದರವಾಗಿವೆ. ಮೊದಮೊದಲು ಕನ್ನಡ ಲಿಪಿ ಚೌಕಾಕಾರವಾಗಿದ್ದು ಕಾಲಕ್ರಮದಲ್ಲಿ ದುಂಡಾಗುತ್ತಾ ನಡೆಯಿತು. ಅಶೋಕನ ಬ್ರಾಹ್ಮೀಲಿಪಿಯಿಂದ ಕನ್ನಡ ಲಿಪಿ ಹೇಗೆ ನಿಷ್ಪನ್ನವಾಯಿತು ಎಂಬುದಕ್ಕೆ ಉದಾಹರಣೆಯಾಗಿ ನಾವು ಇಂದಿನ 'ಕ' ವರ್ಣವನ್ನು ತೆಗೆದುಕೊಳ್ಳಬಹುದು. ಅಶೋಕ ಲಿಪಿಯಲ್ಲಿ 'ಕ' ವರ್ಣವನ್ನು ಸರಳವಾಗಿ ಲ್ಯಾಟೀನ್ ಕ್ರೂಜೆಯ ಆಕಾರದಲ್ಲಿ '+' ಹೀಗೆ ತೋರಿಸಲಾಗುತ್ತಿತ್ತು. ಇದರಿಂದ ಗವಿಲಿಪಿಯ '[illegible]', ವತ್ತೆಕುಪ್ಪುವಿನ '[illegible]', ದೇವನಾಗರಿಯ 'क' ಹಾಗೂ ಕನ್ನಡ-ತೆಲುಗು '[illegible]' 'ಕ' '[illegible]' ಸಂಜ್ಞೆಗಳು ಬಂದವು ಮತ್ತು ಅಶೋಕನ 'ಅ' ಸಂಜ್ಞಾಸೂಚಕ '[illegible]' ದಿಂದ ದೇವನಾಗರಿಯ 'अ', ಕನ್ನಡ-ತೆಲಗುಗಳ '[illegible]' '[illegible]' '[illegible]' '[illegible]' ಬಂದಿತು.

ಕದಂಬರ ಕಾಲದ ಲಿಪಿಯ ಬಹುಮುಖ್ಯ ವೈಶಿಷ್ಟ್ಯವೆಂದರೆ ಕೆಲವು ಶಾಸನಗಳ ಅಕ್ಷರಗಳಲ್ಲಿ ಕಂಡುಬರುವ ಚೌಕಾಕೃತಿಯ ತಲೆಕಟ್ಟುಗಳು. ಇಂತಹ ತಲೆಕಟ್ಟುಗಳು ಅದೇ ಕಾಲದ ಗುಪ್ತರ ಶಾಸನಗಳಲ್ಲಿಯೂ ಕಂಡುಬರುತ್ತದೆ. ಕದಂಬ ಲಿಪಿಯ ಅಕ್ಷರಗಳು ಎತ್ತರದಲ್ಲಿ ಕಡಿಮೆಯಿದ್ದು ದುಂಡಾಗಿವೆ. ೬-೭ನೇ ಶತಮಾನದ ಬಾದಾಮಿ ಚಾಳುಕ್ಯರ ಶಾಸನ ಲಿಪಿಗಳಲ್ಲಿ ತಲೆಕಟ್ಟುಗಳು ಬಹಳ ಚಿಕ್ಕವಾಗಿದ್ದು, ಸರಳ ರೇಖೆಯಿಂದ ಕೂಡಿವೆ. ಕೆಲವು ಶಾಸನಗಳಲ್ಲಿ ಕ ಮತ್ತು ರ ಅಕ್ಷರಗಳ ಲಂಬರೇಖೆಯ ಎಡಭಾಗಕ್ಕೆ ಮೇಲಕ್ಕೆ ಹೋಗಿ ಮೇಲ್ಭಾಗದ ಅಡ್ಡಗೆರೆಗೆ ಹೊಂದಿಕೊಂಡಿದೆ. ರಾಷ್ಟ್ರಕೂಟರ ಶಾಸನಗಳಲ್ಲಿ ಪದದಾದಿಯ ಅ ಮತ್ತು ಇ ಅಕ್ಷರಗಳು ಹೆಚ್ಚಿನಬೆಳವಣಿಗೆಯನ್ನು ಸೂಚಿಸುತ್ತವೆ. ಹೀಗೆ ವಿಕಾಸ ಹೊಂದುತ್ತಾ ಕನ್ನಡ ಲಿಪಿ ಕ್ರಿ.ಶ.೧೦-೧೨ನೆಯ ಶತಮಾನದ ಕಲ್ಯಾಣಿಯ ಚಾಳುಕ್ಯರ ಕಾಲದಲ್ಲಿ ಸಾಕಷ್ಟು ದುಂಡಾಗಿ, ಆಧುನಿಕ ಕನ್ನಡ ಲಿಪಿಯ ಲಕ್ಷಣಗಳನ್ನು ಹೋಲುತ್ತದೆ.

೧೨-೧೩ನೆಯ ಶತಮಾನದಲ್ಲಿ ಹೊಯ್ಸಳರ ಕಾಲದ ಅನೇಕ ಶಾಸನಗಳನ್ನು ನುಣುಪಾದ ಕಲ್ಲಿನ ಹಲಗೆಯ ಮೇಲೆ ಅಲಂಕಾರಯುತವಾಗಿ ಹಾಗೂ ಕಲಾತ್ಮಕವಾಗಿ ಬರೆಯಲಾಗಿದ್ದು ಅಕ್ಷರಗಳು ಹೆಚ್ಚು ಸುಂದರವಾಗಿವೆ. ಆದರೆ ಕಲ್ಯಾಣಿ ಚಾಳುಕ್ಯರ ಮತ್ತು ಹೊಯ್ಸಳರ ಕಾಲದ ಲಿಪಿಯ ಅಕ್ಷರಗಳಂತೆ ವಿಜಯ ನಗರದ ಲಿಪಿಯು ಸುಂದರವಾಗಿಲ್ಲ. ಅಕ್ಷರಗಳನ್ನು ಡೊಂಕು-ಡೊಂಕಾಗಿ ಬರೆಯಲಾಗಿದ್ದು, ಅವುಗಳ ಜೋಡಣೆಯಲ್ಲಿ ಅಷ್ಟಾಗಿ ಗಮನ ಹರಿಸಿದಂತೆ ಕಾಣುವುದಿಲ್ಲ.

ಸುಮಾರು ೧೩-೧೪ನೇ ಶತಮಾನಗಳವರೆಗೆ ಕನ್ನಡ ಮತ್ತು ತೆಲುಗು ಲಿಪಿಗಳು ಒಂದೇ ತೆರನದ್ದಾಗಿವೆ. ೧೪-೧೫ನೆಯ ಶತಮಾನದಿಂದ ಮಾತ್ರ ಕನ್ನಡ ಹಾಗೂ ತೆಲುಗು ಲಿಪಿಗಳಲ್ಲಿ ವ್ಯತ್ಯಾಸವನ್ನು ಕಾಣಲು ಪ್ರಾರಂಭಿಸಿತು. ಆದರೆ ಈಗಲೂ ಕನ್ನಡ ಲಿಪಿ ಬಲ್ಲವನಿಗೆ ತೆಲುಗು ಓದಲು, ತೆಲುಗು ಲಿಪಿ ಬಲ್ಲವನಿಗೆ ಕನ್ನಡ ಓದಲು ಕಷ್ಟವಾಗುವುದಿಲ್ಲ. ಆದರೆ ವಿಜಯನಗರದ ಕಾಲದ ನಂತರ ಈ ಹೆಚ್ಚಿನ ಬದಲಾವಣೆಯನ್ನು ಕಾಣಬಹುದಾಗಿದೆ. ೧೮ನೆಯ ಶತಮಾನದಲ್ಲಿ ಮೈಸೂರು ಅರಸರ ಕಾಲದಲ್ಲಿ ಕನ್ನಡ ಲಿಪಿ ವಿಜಯನಗರ ಕಾಲದ ಅಕ್ಷರದ ಕೆಲವು ಗುಣಗಳನ್ನು ಉಳಿಸಿಕೊಂಡಿದ್ದರೂ, ಆಧುನಿಕ ಕನ್ನಡ ಲಿಪಿಗೆ ಹತ್ತಿರವಾಗಿದೆ. ಮದ್ರಣ ಸೌಲಭ್ಯ ಬಂದ ಮೇಲೆ ಕನ್ನಡ ಲಿಪಿ ಒಂದು ಸ್ಥಿತಿಗೆ ತಲುಪಿ ಹೆಚ್ಚಿನ ವಿಕಾಸಕ್ಕೆ ಆಸ್ಪದವಿಲ್ಲದಂತಾಯಿತಾದರೂ, ಮುದ್ರಣ ಲಿಪಿಯೂ ಕೂಡ ಕಾಲಕಾಲಕ್ಕೆ

ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡು ವಿವಿಧ ಶೈಲಿಗಳಲ್ಲಿ ಸುಂದರವಾಗಿ ಅಚ್ಚಾಗುತ್ತಿವೆ.

**ಕನ್ನಡ ವರ್ಣಗಳು:–**

ಕನ್ನಡದ ವರ್ಣಗಳ ಬಗ್ಗೆ ಸಾಕಷ್ಟು ಚರ್ಚೆಗಳು ನಡೆದಿವೆ. ಸಂಸ್ಕೃತ ವರ್ಣಗಳ ಹಿನ್ನಲೆಯಲ್ಲಿಯೇ ಕನ್ನಡದ ವರ್ಣಗಳು ರೂಪುಗೊಂಡಿವೆ ಎಂದು ಹಲವಾರು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಆದರೆ ನಾಗವರ್ಮ ಮತ್ತು ಕೇಶಿರಾಜಾದಿಗಳ ತೌಲನಿಕ ಭಾಷಾ ದೃಷ್ಟಿಯಿಂದ ಸಂಸ್ಕೃತದಲ್ಲಿ ಇರುವ ಹಲವು ವರ್ಣಗಳು ಕನ್ನಡದಲ್ಲಿ ಇಲ್ಲ, ಕನ್ನಡದಲ್ಲಿ ಇರುವ ಕೆಲವು ವರ್ಣಗಳು ಸಂಸ್ಕೃತದಲ್ಲಿ ಇಲ್ಲವೆಂದು ಹೇಳಿದ್ದಾರೆ.

ಕೇಶಿರಾಜನು ಗುರುತಿಸುವಂತೆ ಸಂಸ್ಕೃತದಲ್ಲಿ ವರ್ಣಗಳು ಇಂತಿವೆ

| | |
|---|---|
| ಸ್ವರಗಳು | –೧೪ |
| ವರ್ಗೀಯ ವ್ಯಂಜನಗಳು | –೨೫ |
| ಅವರ್ಗೀಯ ವ್ಯಂಜನಗಳು | –೯ |
| ಯೋಗವಾಹಗಳು | –೪ |
| ಒಟ್ಟು | –೫೨ |

ಸಂಸ್ಕೃತದ ಈ ೫೨ ವರ್ಣಗಳಲ್ಲಿ ಕೆಲವು ವರ್ಣಗಳು ಕನ್ನಡದಲ್ಲಿಲ್ಲದಿರುವುದನ್ನು ಗುರುತಿಸಬಹುದಾಗಿದೆ. ಅವುಗಳೆಂದರೆ ಋ,ೠ ,ಌ,ೡ ,ಶ,ಷ,ವಿಸರ್ಗ , ಱ ಮತ್ತು ೞ. ಸಂಸ್ಕೃತದಲ್ಲಿ ಈ ೧೦ ವರ್ಣಗಳನ್ನು ತೆಗೆದರೆ ಉಳಿದವು ೪೨. ಸಂಸ್ಕೃತದಲ್ಲಿ ಇರದ ಐದು ದೇಶ್ಯ ವರ್ಣಗಳನ್ನು ಕನ್ನಡದಲ್ಲಿ ಕಾಣಬಹುದಾಗಿದೆ. 'ಱ', 'ಱ', 'ೞ', 'ಎ' ಮತ್ತು 'ಒ'. ಮೇಲಿನ ಉಳಿದ ೪೨ ಅಕ್ಷರಕ್ಕೆ ಈ ಐದು ದೇಶ್ಯ ವರ್ಣಗಳು ಸೇರಿ ಒಟ್ಟು ೪೭ ಅಕ್ಷರಗಳು ಎಂದಿದ್ದಾರೆ. ಇದನ್ನೇ ಕೇಶಿರಾಜನು "ನಲ್ವತ್ತೇಳಾಯ್ತೆಳೆ ಶುದ್ಧಗೆ ಅಚ್ಚಕನ್ನಡಕ್ಕೀ ಕ್ರಮದಿಂ" ಎಂದಿದ್ದಾನೆ. ಕೇಶಿರಾಜಾದಿಗಳು ಹೇಳಿದ ಈ ೪೭ ವರ್ಣಗಳಲ್ಲಿಯೂ ಆಧುನಿಕರ ಮೇರೆಗೆ 'ಱ','ೞ' ವರ್ಣಗಳು, ಅನುಸ್ವಾರ, ಐ,ಔ ಸಂಧ್ಯಾಕ್ಷರಗಳು ಹಾಗೂ ಹತ್ತು ಮಹಾಪ್ರಾಣಗಳು ಹೊಸಗನ್ನಡಕ್ಕೆ ಬೇಕಾಗಿಲ್ಲ. ೪೭ರಲ್ಲಿ ೧೫ ವರ್ಣಗಳನ್ನು ಕಳೆದರೆ ಕನ್ನಡಕ್ಕೆ ೩೨ ವರ್ಣಗಳು ಮಾತ್ರ ಸಾಕು ಎಂದಿದ್ದಾರೆ.

| | ರಾಜವಂಶ | ಕಾಲ |
|---|---|---|
| 1 | | ಕ್ರಿ.ಪೂ. ಸು 450 |
| 2 | ಮೌರ್ಯ | ಕ್ರಿ.ಪೂ. 250 |
| 3 | | ಕ್ರಿ.ಪೂ. 200 |
| 4 | ಕ್ಷತ್ರಪ | ಕ್ರಿ.ಪೂ. 150 |
| 5 | ಕಳಿಂಗ | ಕ್ರಿ.ಪೂ. 150 |
| 6 | | ಕ್ರಿ.ಪೂ. 150 |
| 7 | ಆಂಧ್ರ | |
| 8 | ಕ್ಷತ್ರಪ | 150 |
| 9 | ಆಂಧ್ರ | 150 |
| 10 | ಕದಂಬ | 1ನೆಯ ಶತಮಾನ |
| 11 | ಆಂಧ್ರ | 150 |
| 12 | ಕದಂಬ | 250 |
| 13 | ಗುಪ್ತ | ಸು 375 |
| 14 | ಕದಂಬ | 450 |
| 15 | ಕದಂಬ | ಸು 450 |
| 16 | ಗಂಗ | ಸು 550 |
| 17 | ಚಳುಕ್ಯ | 543 |
| 18 | ಚಳುಕ್ಯ | 578 |
| 19 | ಚಳುಕ್ಯ | 634 |
| 20 | ಚಳುಕ್ಯ | ಸು. 710 |
| 21 | ಗಂಗ | 720 |
| 22 | ಗಂಗ | 750 |
| 23 | ರಾಷ್ಟ್ರಕೂಟ | 812 |
| 24 | ರಾಷ್ಟ್ರಕೂಟ | 881 |
| 25 | ಗಂಗ | 921 |
| 26 | ನೊಳಂಬ | |
| 27 | ಚಾಳುಕ್ಯ | 1094 |
| 28 | ಹೊಯ್ಸಳ | 1117 |
| 29 | ಹೊಯ್ಸಳ | 1224 |
| 30 | ವಿಜಯನಗರ | 1368 |
| 31 | ವಿಜಯನಗರ | 1538 |
| 32 | ಪಾಳೇಗಾರ | 1698 |
| 33 | ಮೈಸೂರು | 1724 |
| 34 | ಮೈಸೂರು | 1825 |

ಕನ್ನಡಲಿಪಿಯ ವಿಕಾಸ

ಅಧ್ಯಾಯ೩

# ಕನ್ನಡ ಭಾಷೆಯ ವಿವಿಧ ಕಾಲಘಟ್ಟಗಳು

ಇತರ ಭಾಷೆಗಳಂತೆ 'ಕನ್ನಡ ಭಾಷೆ'ಯಲ್ಲೂ ಶಬ್ದ, ವರ್ಣ, ಅರ್ಥದ ಸೃಷ್ಟಿಯಲ್ಲಿ ಕಾಲದಿಂದ ಕಾಲಕ್ಕೆ ಬದಲಾವಣೆಯ ಕ್ರಿಯೆ ನಡೆದಿರುವುದನ್ನು ಕಾಣಬಹುದು. ಕನ್ನಡ ಭಾಷೆಯು ಹಲ್ಮಿಡಿ ಶಾಸನದಿಂದ ಇಂದಿನವರೆಗೆ ವಿವಿಧ ಬಗೆಯಲ್ಲಿ ಬದಲಾಗುತ್ತಾ ಬಂದಿದೆ. ಎಲ್ಲಾ ವಿದ್ವಾಂಸರು ಈ ವ್ಯತ್ಯಾಸವನ್ನು ಒಪ್ಪಿಕೊಂಡರೂ ಅವು ಯಾವುವು ಮತ್ತು ಅವುಗಳ ಕಾಲ ಮಿತಿಯೇನು ಎಂಬ ವಿಚಾರದಲ್ಲಿ ಭಿನ್ನಾಭಿಪ್ರಾಯವಿದೆ. ಎರಡು ಅವಸ್ಥೆಗಳ ಭಾಷೆಯನ್ನು ಪರಿಶೀಲಿಸಿದರೆ ಸಾಕು ಆಗ ಅವುಗಳ ಧ್ವನಿಮಾ, ಆಕೃತಿಮಾ, ಶಬ್ದ, ವಾಕ್ಯ, ಅರ್ಥಗಳಲ್ಲಿ ವ್ಯತ್ಯಾಸ ಉಂಟಾಗಿರುವುದು ತಿಳಿದು ಬರುತ್ತದೆ.

ಒಂದು ಭಾಷೆ ಅಂದಿನಿಂದ ಇಂದಿನವರೆಗೆ ಪರಿವರ್ತನೆಗೊಂಡ ರೀತಿ ಮತ್ತು ವೈಶಿಷ್ಟ್ಯವನ್ನರಿಯಬೇಕಾದರೆ ಆ ಭಾಷೆಯ ಲಿಖಿತ ದಾಖಲೆಗಳನ್ನು ಅವಲಂಬಿಸಬೇಕಾಗುತ್ತದೆ. ಅದಕ್ಕಾಗಿ ಸಾಹಿತ್ಯ ಗ್ರಂಥ ಮತ್ತು ವ್ಯಾಕರಣ ಕೃತಿಗಳನ್ನು ಗಮನಿಸಿದ ವಿದ್ವಾಂಸರು ಸ್ಥೂಲವಾಗಿ ನೃಪತುಂಗನ ಪೂರ್ವಯುಗದ ಕನ್ನಡವನ್ನು ಪೂರ್ವದ ಹಳಗನ್ನಡವೆಂದೂ, ಬಸವೇಶ್ವರ ಹಾಗೂ ಪುರಂದರದಾಸರ ಯುಗದ ಕನ್ನಡವನ್ನು ನಡುಗನ್ನಡವೆಂದೂ ೧೭ನೇ ಶ.ದ ಈಚಿಗಿನ ಕನ್ನಡವನ್ನು ಹೊಸಗನ್ನಡವೆಂದೂ ಕೆಲವರು ಹೆಸರಿಸಿಕೊಂಡಿದ್ದಾರೆ. ಇದೇ ರೀತಿಯಲ್ಲಿ ರೂಪಾಂತರ ಹೊಂದಿರುವ ಇಂದಿನ ಬದಲಾವಣೆಯನ್ನು 'ನವೀನ ಕನ್ನಡ' ಎಂದು ಗುರುತಿಸಬಹುದು.

ಕನ್ನಡ ಭಾಷೆಯಲ್ಲಿ ಅವಸ್ಥಾಂತರಗಳನ್ನು ಒಪ್ಪಿದರೂ ಅವು ಯಾವುವು ಮತ್ತು ಅವುಗಳ ಕಾಲ ಮಿತಿಯೇನು ಎಂಬ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿವೆ.

೧. ಪಾಶ್ಚಾತ್ಯ ವಿದ್ವಾಂಸರಾದ ಬಿ.ಎಲ್.ರೈಸ್‌ರವರು ಕನ್ನಡ ಭಾಷೆಯ ಅವಸ್ಥೆಗಳನ್ನು ಗುರುತಿಸುವಾಗ ಉಪಲಬ್ಧ ಕೃತಿ ಮತ್ತು ಶಾಸನಗಳನ್ನು ಆಧರಿಸಿ ಕ್ರಿ.ಪೂ.೩ನೇ ಶ.ದಲ್ಲಿ ಬನವಾಸಿಯ ಸುತ್ತಮುತ್ತಲ ಪ್ರದೇಶದಲ್ಲಿ ಬಳಕೆಯಾಗಿದ್ದು, ಪೂರ್ವದ ಹಳಗನ್ನಡ, ೮ ರಿಂದ ೧೪ರವರೆಗಿನ ಶತಮಾನದ ಕನ್ನಡವನ್ನು ಹಳಗನ್ನಡವೆಂದೂ, ಇಂದು ಪ್ರಚಲಿತವಾಗಿರುವ ಕನ್ನಡವನ್ನು ಹೊಸಗನ್ನಡವೆಂದೂ

ಕರೆಯಬಹುದಾದರೂ, ಅವುಗಳ ಕಾಲಮಿತಿಯನ್ನು ನಿರ್ದಿಷ್ಟವಾಗಿ ಹೇಳಲು ಸಾಧ್ಯವಾಗದೆಂದು ಹೇಳತ್ತಾರೆ.

೨. ರೆವರೆಂಡ್.ಎಫ್.ಕಿಟಲ್‌ರವರು ತಮ್ಮ ಕನ್ನಡ-ಇಂಗ್ಲೀಷ್ ನಿಘಂಟುವಿನಲ್ಲಿ ಕನ್ನಡ ಭಾಷೆಯನ್ನು ಐತಿಹಾಸಿಕವಾಗಿ ಮೂರು ಅವಸ್ಥೆಗಳಲ್ಲಿ ಗುರುತಿಸಬಹುದಾಗಿದೆ ಎಂದಿದ್ದಾರೆ.

- ೯೦೦ ರಿಂದ ೧೨೫೦ - ಹಳಗನ್ನಡ
- ೧೨೫೦ ರಿಂದ ೧೬೦೦-ನಡುಗನ್ನಡ
- ೧೬೦೦ ರಿಂದ ಮುಂದೆ- ಹೊಸಗನ್ನಡ

ಇಲ್ಲಿ ಪೂರ್ವದ ಹಳಗನ್ನಡಕ್ಕೆ ಸ್ಥಾನವನ್ನು ಕಲ್ಪಿಸಿಲ್ಲ. ಆದರೆ ಪೂರ್ವದ ಹಳಗನ್ನಡ ಅನೇಕ ಅಂಶಗಳಲ್ಲಿ ಹಳಗನ್ನಡಕ್ಕಿಂತ ಭಿನ್ನವಾಗಿದ್ದು ಶಾಸನಗಳಲ್ಲಿ ಬಳಸಲಾಗಿದೆ. ಇವರು ೯೦೦ಕ್ಕಿಂತ ಮುಂಚಿನ ಭಾಷೆಯನ್ನು ನಿರ್ಲಕ್ಷಿಸಿದ್ದಾರೆ.

೩. ಬಿ.ಎಂ.ಶ್ರೀ ಮತ್ತು ಟಿ.ಎಸ್.ವೆಂಕಣ್ಣಯ್ಯನವರು ನಾಲ್ಕು ಅವಸ್ಥೆಗಳನ್ನು ಸೂಚಿಸುತ್ತಾರೆ. ಪೂರ್ವದ ಹಳಗನ್ನಡಕ್ಕೆ ಸ್ಥಾನ ಕಲ್ಪಿಸಿದರೂ ನಿರ್ದಿಷ್ಟ ಕಾಲವನ್ನು ಸೂಚಿಸಿಲ್ಲ.

೪. ಆರ್.ನರಸಿಂಹಾಚಾರ್ಯರು ಬಿ.ಎಲ್.ರೈಸ್‌ರವರಂತೆ ಪೂರ್ವದ ಹಳಗನ್ನಡ, ಹಳಗನ್ನಡ, ಹೊಸಗನ್ನಡವೆಂದು ಮೂರು ಹಂತಗಳಲ್ಲಿ ವಿಭಾಗಿಸಬಹುದೆಂದು ಅಭಿಪ್ರಾಯಪಟ್ಟರು. ಮುಂದೆ "ಹಿಸ್ಟರಿ ಆಫ್ ಕನ್ನಡ ಲಾಂಗ್ವೇಜ್" ಎಂಬ ಕೃತಿಯಲ್ಲಿ ಕನ್ನಡ ಭಾಷೆಗೆ ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡವೆಂದು ಪ್ರತಿಪಾದಿಸಿದರು. ಪೂರ್ವದ ಹಳಗನ್ನಡವು ಕದಂಬರ ರಾಯಭಾರಿಯಾದ ಬನವಾಸಿ ಪ್ರಾಂತ್ಯದಲ್ಲಿ ಬಳಕೆಯಲ್ಲಿತ್ತು ಎಂದಿದ್ದಾರೆ. ಈ ಅವಸ್ಥಭೇದಗಳು ಇಂತಿಂಥ ಕಾಲದಲ್ಲಿಯೇ ಕೊನೆಗೊಂಡಿರಬಹುದೆಂದು ಹೇಳಲಾಗುವುದಿಲ್ಲ. ಆ ಕಾಲಗಳಲ್ಲಿ ಕಂಡುಬರುವ ಭಾಷೆಯ ರೂಪಗಳಿಂದ ಅವಸ್ಥಾಂತರಗಳನ್ನು ಗುರುತಿಸಬಹುದಾಗಿದೆ ಎಂದಿದ್ದಾರೆ.

೫. ಕನ್ನಡ ಕೈಪಿಡಿಕಾರರು ಕನ್ನಡ ಭಾಷೆಗೆ ಹಳಗನ್ನಡ ರೂಪವು ಬರುವುದಕ್ಕೆ ಮುಂಚೆ ಪೂರ್ವದ ಹಳಗನ್ನಡ ಇತ್ತು ಎಂದು ಒಪ್ಪುತ್ತಾರೆ. ಈಗ ಲಭ್ಯವಿರುವ ಪ್ರಾಚೀನ ಶಾಸನಗಳಲ್ಲಿ ಹಳಗನ್ನಡಕ್ಕಿಂತ ಭಿನ್ನವಾದ ಶಬ್ದ ರೂಪಗಳು ದೊರೆಯುತ್ತವೆ. ಅವು ತಮಿಳು ಭಾಷೆಯನ್ನು ವಿಶೇಷವಾಗಿ ಹೋಲುತ್ತವೆ. ತಮಿಳು ಕನ್ನಡಗಳೆರಡು ಹಿಂದೆ ಒಂದು ಕಾಲದಲ್ಲಿ ಒಂದೇ ಭಾಷೆಯಾಗಿದ್ದರಿಂದ ಆ ಶಬ್ದರೂಪಗಳು ಪೂರ್ವದ ಹಳಗನ್ನಡವೆಂದು ಸೂಚಿಸಿಕೊಳ್ಳಬಹುದು ಎಂಬ ಅಭಿಪ್ರಾಯವನ್ನು ಪಡುತ್ತಾರೆ.

೬. ಮಾಸ್ತಿಯವರು ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಎಂಬ ನಾಲ್ಕು ಅವಸ್ಥೆಗಳ ಕಾಲಮಿತಿಯನ್ನು ತುಂಬಾ ಸಂಕ್ಷಿಪ್ತವಾಗಿ ವಿವರಿಸುತ್ತಾ, ಅವುಗಳ ವೈಶಿಷ್ಟ್ಯವನ್ನು ಪಟ್ಟಿಮಾಡುತ್ತಾರೆ. ಇವರ ಪ್ರಕಾರ ಈ ನಾಲ್ಕು ಕಾಲದ ಕನ್ನಡಗಳ ಮಧ್ಯೆ ಇರುವ ವ್ಯತ್ಯಾಸ ಅವುಗಳನ್ನು ಬೇರೆ ಬೇರೆ ಮಾರ್ಪಡಿಸುವಷ್ಟಿಲ್ಲ ಎನ್ನುತ್ತಾರೆ.

೭. ಆರ್.ರಘುನಾಥರಾಯರು ಈ ವಿಧವಾದ ಅವಸ್ಥಾ ವಿಭಾಗವನ್ನು ಒಪ್ಪದೆ, ಕವಿರಾಜಮಾರ್ಗಕಾರ, ನಾಗವರ್ಮ ಮೇಲಾದವರು ಹೇಳಿದ ದಕ್ಷಿಣೋತ್ತರ ಮಾರ್ಗಗಳನ್ನು ಮಾತ್ರ ಒಪ್ಪಿ ಆ ಪ್ರಕಾರ ವಿಭಾಗ ಮಾಡಿದ್ದಾರೆ. ದಕ್ಷಿಣ–ಹಳಗನ್ನಡ; ಉತ್ತರ–ಹಳಗನ್ನಡ; ಷಟ್ಪದಿಗಳ ಕನ್ನಡ ಮಿಶ್ರಯುಗದ್ದು; ಹಳಗನ್ನಡ. ಹೊಸಗನ್ನಡಗಳು ಅವಳಿ–ಜವಳಿ ಮಕ್ಕಳು; ಅಕ್ಕ–ತಂಗಿಯರಲ್ಲ ಎಂದು ಹೇಳಿದ್ದಾರೆ.

"ಆದರೆ ಇವರು ಹೇಳುವ ದಕ್ಷಿಣೋತ್ತರ ಮಾರ್ಗಗಳನ್ನು ಪ್ರಾದೇಶಿಕ ಪ್ರಭೇದಗಳೆಂದೇ ಭಾವಿಸುವುದು ಸರಿಯೆನಿಸುತ್ತದೆ. ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಎಂಬ ನಾಲ್ಕು ಅವಸ್ಥೆಗಳು ಕನ್ನಡ ಪ್ರಾದೇಶಿಕ ಉಪಭಾಷೆಗಳಲ್ಲ. ಅವು ಗ್ರಂಥಸ್ಥ ಕನ್ನಡ ಭಾಷೆಯಲ್ಲಿ ಕಾಲಕಾಲಕ್ಕೆ ಆದ ಮಾರ್ಪಾಡುಗಳೆಂದೇ ಭಾವಿಸುವುದು ಯೋಗ್ಯವಾಗಿದೆ. ಕನ್ನಡ ಸಾಹಿತ್ಯದ ವಿವಿಧ ಗ್ರಂಥಗಳನ್ನು ಪರಿಶೀಲಿಸಿದರೆ ಇದು ಸ್ಪಷ್ಟವಾಗುತ್ತದೆ." (ಕನ್ನಡ ಭಾಷೆಯ ಚರಿತ್ರೆ– ಪ್ರ.ಗೋ.ಕುಲಕರ್ಣಿ: ಪು–೧೩೬,೧೩೭,೧೩೮)

೮. ಕನ್ನಡದಲ್ಲಿ ಸ್ಥೂಲವಾಗಿ ಹಳಗನ್ನಡ ಮತ್ತು ಹೊಸಗನ್ನಡ ಎಂಬ ಎರಡು ಅವಸ್ಥೆಗಳು ಮಾತ್ರ ಇದೆ. ಪೂರ್ವದ ಹಳಗನ್ನಡ ಮತ್ತು ನಡುಗನ್ನಡದ ಕಾಲಗಳು ಕೇವಲ ಸಂಕ್ರಮಣ ಕಾಲಗಳೇ ಹೊರತು ಅವು ಪ್ರತ್ಯೇಕ ಅವಸ್ಥೆಗಳಲ್ಲ ಎಂಬ

ಅಭಿಪ್ರಾಯವೂ ಇದೆ. ಪೂರ್ವದ ಹಳಗನ್ನಡ ಕೇವಲ ಶಾಸನಗಳಲ್ಲಿ ಮಾತ್ರ ಪ್ರಯೋಗವಾಗಿದ್ದರೂ ಹಳಗನ್ನಡದ ಸ್ವರೂಪಕ್ಕಿಂತ ಭಿನ್ನವಾಗಿದ್ದು, ಇದನ್ನೆ ಕನ್ನಡದ ಮೂಲ ಅವಸ್ಥೆಯನ್ನಾಗಿ ಸ್ವೀಕರಿಸಬಹುದು. ರಗಳೆ, ಷಟ್ಪದಿ ಮುಂತಾದ ಪ್ರಕಾರಗಳ ಕಾವ್ಯದಲ್ಲಿ ಬಳಕೆಯಾಗಿರುವ ಕನ್ನಡ ಪೂರ್ಣವಾಗಿ ಹಳಗನ್ನಡವೂ ಅಲ್ಲದ, ಹೊಸಗನ್ನಡವೂ ಅಲ್ಲದ ಇವೆರಡರ ನಡುವೆ ಬೇರೊಂದು ಅವಸ್ಥೆಯನ್ನು ಸೂಚಿಸುತ್ತದೆ. ಸುಮಾರು ೩-೪ ಶತಮಾನಗಳವರೆಗೆ ಈ ಭಾಷಿಕಾವಸ್ಥೆ ಕನ್ನಡದಲ್ಲಿದ್ದು ಅನೇಕ ಕೃತಿ ರಚನೆಯಾಗಿವೆ. ಆದ್ದರಿಂದ ಇದನ್ನು ಅಧ್ಯಯನದ ದೃಷ್ಟಿಯಿಂದ ಸ್ವೀಕರಿಸಲೇಬೇಕು.

ಹೀಗೆ ವಿದ್ವಾಂಸರ ವಿವಿಧ ಅಭಿಪ್ರಾಯಗಳ ಮಂಡನೆಯಿಂದ ನಾಲ್ಕು ಅವಸ್ಥೆಗಳನ್ನು ಸ್ವೀಕರಿಸಿದರೂ ಕಾಲ ನಿರ್ಣಯ ದೊಡ್ಡ ಸಮಸ್ಯೆಯಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಪ್ರಮುಖವಾಗಿ ನಾಲ್ಕು ಕಾಲಘಟ್ಟಗಳನ್ನು ಪರಿಗಣಿಸಲಾಗಿದೆ.

- ಆದಿಯಿಂದ ೮ನೇ ಶತಮಾನದವರೆಗೆ –ಪೂರ್ವದ ಹಳಗನ್ನಡ
- ೮ ರಿಂದ ೧೦ನೇ ಶತಮಾನದವರೆಗೆ –ಹಳಗನ್ನಡ
- ೧೦ ರಿಂದ ೧೬ನೇ ಶತಮಾನದವರೆಗೆ –ನಡುಗನ್ನಡ
- ೧೬ ರಿಂದ ಈಗಿನವರೆಗೆ –ಹೊಸಗನ್ನಡ

# (ಅ). ಪೂರ್ವದ ಹಳಗನ್ನಡ

ಒಂದು ಭಾಷೆ ಲಿಪಿಗೆ ಒಳಪಟ್ಟಾಗ ಮಾತ್ರ ಅದರ ಚರಿತ್ರೆಯನ್ನು ಕಂಡುಹಿಡಿಯಲು ಸಾಧ್ಯವಾಗುತ್ತದೆ. ಲಿಪಿಗೆ ಅಳವಡದ ಭಾಷೆಯ ಸ್ಥಿತಿಯು ಆ ಭಾಷೆಯ ಶೈಶವಾವಸ್ಥೆಯೆಂದು ಹೇಳಬಹುದು.

ಕ್ರಿ.ಶ.ದ ಪ್ರಾರಂಭದಲ್ಲಿಯೇ ಕನ್ನಡಕ್ಕೆ ಸ್ವತಂತ್ರ ಅಸ್ಥಿತ್ವ ಪ್ರಾಪ್ತಿಯಾಗಿತ್ತೆಂದೂ, ಕ್ರಿ.ಶ.೫ನೇ ಶತಮಾನಕ್ಕೆ ಅದು ಲಿಪಿಯನ್ನು ಅಳವಡಿಸಿಕೊಂಡು ವ್ಯಾವಹಾರಿಕವಾಗಿ ಪರಿಣಮಿಸಿತ್ತೆಂದೂ, ಈಗ ದೊರೆತಿರುವ ಆಧಾರಗಳಿಂದ ತಿಳಿಯಬಹುದಾಗಿದೆ. ಕ್ರಿ.ಶ.ದ ಪ್ರಾರಂಭದಿಂದ ೫ನೇ ಶ.ದವರೆಗಿನ ಕಾಲಾವಧಿಯು ಕನ್ನಡದ ಶೈಶವಾವಸ್ಥೆಯೆಂದು ಹೇಳಬಹುದು. ಕನ್ನಡದ ಭಾಷೆಯು ಲಿಖಿತ ರೂಪದಲ್ಲಿ ದೊರೆತಿರುವುದು ಶಾಸನದ ರೂಪದಲ್ಲಿ. ಕ್ರಿ.ಶ.೪೫೦ರಲ್ಲಿ ಹಾಸನ ಜಿಲ್ಲೆಯ ಪಲ್ಮಿಡಿ ಎಂಬಲ್ಲಿ ದೊರೆತ ಹಲ್ಮಿಡಿ ಶಾಸನ ಕನ್ನಡದ ಮೊದಲ ಶಾಸನವಾಗಿದೆ. ಇದಾದ ನಂತರ ಸಾಕಷ್ಟು ಶಾಸನಗಳನ್ನು ಕಾಣಬಹುದಾಗಿದೆ. ಕ್ರಿ.ಶ.ಸು.೪೮೦ರಲ್ಲಿ ದೊರೆತ ಸಿರಿಗುಂದದ ಶಿಲಾಶಾಸನ, ಕ್ರಿ.ಶ.೫೭೮ರಲ್ಲಿ ವಿಜಾಪುರ ಜಿಲ್ಲೆಯಲ್ಲಿ ದೊರೆತ ಬಾದಾಮಿಯ ಶಿಲಾಶಾಸನ, ಕ್ರಿ.ಶ.ಸು.೬೭೫ರಲ್ಲಿ ದೊರೆತ ಕಿಗ್ಗದ ಶಿಲಾಶಾಸನ, ಕ್ರಿ.ಶ.ಸು.೬೮೫ರಲ್ಲಿ ದೊರೆತ ಶಿಕಾರಿಪುರ ಶಿಲಾಶಾಸನ, ಕ್ರಿ.ಶ.ಸು.೬೯೨ರಲ್ಲಿ ಶಿವಮೊಗ್ಗ ಜಿಲ್ಲೆಯ ಸೊರಬದಲ್ಲಿ ದೊರೆತ ತಾಮ್ರ ಶಾಸನ, ಕ್ರಿ.ಶ.ಸು.೭೦೦ರಲ್ಲಿ ಹಾಸನ ಜಿಲ್ಲೆಯಲ್ಲಿ ದೊರೆತ ಶ್ರವಣ ಬೆಳುಗೊಳ ಶಿಲಾಶಾಸನ, ಕ್ರಿ.ಶ.ಸು.೭೦೯ರಲ್ಲಿ ವಿಜಾಪುರ ಜಿಲ್ಲೆಯಲ್ಲಿ ದೊರೆತ ಮತ್ತೊಂದು ಶಾಸನ ಐಹೊಳೆ ಶಾಸನ, ಕ್ರಿ.ಶ.೭೫೦ ರಿಂದ ೭೭೦ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದೊರೆತ ಉದಯಾವರ ಶಿಲಾಶಾಸನ ಮುಂತಾದವು ಪೂರ್ವದ ಹಳಗನ್ನಡ ರೂಪವನ್ನು ತಿಳಿಯಲು ಸಹಾಯಕವಾಗಿದೆ. ಪೂರ್ವದ ಹಳಗನ್ನಡವನ್ನು ಬಿ.ಎಲ್.ರೈಸ್‌ರವರು ಪ್ರಥಮ ಬಾರಿಗೆ ಗುರುತಿಸಿದರು.

**ಪೂರ್ವದ ಹಳಗನ್ನಡದ ಕೆಲವು ವಿಶಿಷ್ಟ ಲಕ್ಷಣಗಳು**

೧. ಪೂರ್ವದ ಹಳಗನ್ನಡದಲ್ಲಿ ಕಂಡು ಬರುವ ಅಖ್ಯಾತ ಪ್ರತ್ಯಯಗಳ ಸ್ವರ ದೀರ್ಘವಾಗಿದೆ.

- ಮೂಟಿವಳ್ಳಿಉಂ ಕೊಟ್ಟಾರ್(೪೫೦–ಹಲ್ಮಿಡಿ)
- ರಾಜಶ್ರಾವಿತಮಾಗೆ ಪ್ರಸಾದಂ ಕೆಯ್ದಾರ್ (೬೮೫–ಶಿಕಾರಿಪುರ)

- ಅವರ್ ಸ್ವರ್ಗಾಗ್ರಮನೇಜಿದಾರ್(೭೦೦–ಶ್ರವಣಬೆಳುಗೊಳ)

ಇದರಲ್ಲಿ ಹಳಗನ್ನಡ ರೂಪವಾದ ಅನ್–ಆನ್, ಒನ್–ಅನ್–ಓನ್ ಹೀಗೆ ದೀರ್ಘವಾಗಿದೆ.

ಉದಾ:– ಸಂದಾನ್ – ಸಂದನ್

ಕೊಂದೋನ್ – ಕೊಂದನ್

ಅಜಿದೋನ್ – ಅ ದನ್

ಕೊಟ್ಟೋರ್ – ಕೊಟ್ಟರ್

೨. ಇದರಲ್ಲಿ ದ್ವಿತೀಯ ವಿಭಕ್ತಿ ಪ್ರತ್ಯಯವಾದ ಅನ್ ನ ಬದಲು ಆನ್, ಓನ್‌ಗಳೆಲ್ಲ ದೀರ್ಘವಾಗಿರುವುದನ್ನು ಕಾಣಬಹುದು.

- ಶೌರ್ಯೋರ್ದ್ಯಮಭರಿತೋನ್, ಕಳ್ದೋನ್ ಮಹಾಪಾತಕನ್(ಹಲ್ಮಿಡಿ)
- ಪಟ್ಟಂ ಸೂಡಿದೋರ್, ಇದಾನ್‌ಜಿದೋನ್(೬ನೇ.ಶ.ಸಿರಿಗುಂದ)
- ಎತ್ತಿ ಕೊಳ್ವೋನ್ ದೇಗುಲಮಾನ್ ಅಜಿದೋರ್(೭೦೦.ಶ.ಕಿಗ್ಗ)
- ಅದಾನ್
- ಕೋಟೆಯಾನ್

೩. ಷಷ್ಠೀ ವಿಭಕ್ತಿ ಪ್ರತ್ಯಯದ ಸ್ವರವು ದೀರ್ಘವಾಗಿರುವುದನ್ನು ಕಾಣಬಹುದು.

- ಭಟರಿಯಾ ಪ್ರೇಮಾಲಯ ಸುತನ್ಗೆ(೪೫೦–ಹಲ್ಮಿಡಿ)
- ಮಂಗಳೀಸನಾ ಕಲ್ಮನೆಗೆ, ಏಟನೆಯಾ ನರಕದಾ(೫೭೮–ಬಾದಾಮಿ)
- ಪೊರವಙ ಗೋಸಾಸಿಗರಾ ಮಾಙು (೭೦೯–ಐಹೊಳೆ)
- ನವಿಲೂರಾ ಸಿರಿಸಂಗದಾಜಿಗಣದಾ
- ಗುರುವಡಿಗಳಾ ಶಿಷ್ಯರ್

೪. ಪೂರ್ವದ ಹಳಗನ್ನಡದ ಸಪ್ತಮೀ ವಿಭಕ್ತಿ ಪ್ರತ್ಯಯ ಉಳ್ ಹಳಗನ್ನಡದಲ್ಲಿ ಒಳ್ ಆಗಿರುವುದನ್ನು ಕಾಣಬಹುದು.

- ನರಿದಾವಿಳೆನಾಡುಳ್(೪೫೦–ಹಲ್ಮಿಡಿ)
- ಸಂಕಟದುಳ್(೬೭೫ ಉದ್ಯಾವರ)

- ಕಟ್ವಪ್ಪಿನಾವೆಟ್ಟದುಳ್(೭೦೦–ಶ್ರವಣಬೆಳುಗೊಳ)
- ಭುವಿಯುಳ್
- ವೆಟ್ಟದುಳ್

೫. ಬಿಂದುವಿನ ಸ್ಥಾನದಲ್ಲಿ ನಕಾರವನ್ನು ಬಳಸುವುದು.

- ಸುತನ್ಗೆ, ಸೇನ್ದ್ರಕ, ಕಳ್ದೋನ್ ಮಹಾಪಾತಕನ್(೪೫೦–ಹಲ್ಮಿಡಿ)
- ನಿರ್ವ್ವಿನೀತರಾ ಕಿಜೆಯಾ ಮಗಿನ್ದಿರ್(೬ನೇ.ಶ.ಸಿರಿಗುಂದ)
- ಚಿತ್ರವಾಹನ ಪಿನ್ದುವ್ವಾಳೆ(೬೭೫–ಕಿಗ್ಗ)
- ಒನ್ದು (೭೦೯–ಐಹೊಳೆ)
- ನೋನ್ದಿ
- ಇನ್ಬನಿನ್

೬. ನಿಷೇಧಾರ್ಥಕ ಕ್ರಿಯಾಪದದ ಸ್ವರ ದೀರ್ಘವಾಗಿದೆ.

- ಆ ವಿತ್ತಿದಲ್ಲಿ ವೆಳೆಯಾದೆ ಕೆಡುಗ(೬೮೫–ಶಿಕಾರಿಪುರ)
- ಸಿದ್ದ ಸಮಯನ್ ತಪ್ಪಾದೆ ನೋಂತು(೭೦೦–ಶ್ರವಣಬೆಳುಗೊಳ)
- ಇದನ್ ವಿಕ್ರಮ್ ಇಲ್ಲಾದೆ ಕಾದ(೬೭೫ ಉದ್ಯಾವರ)
- ನಿಲಲಾರಾದೆ

೭. ಇದರಲ್ಲಿ ಗುಣವಾಚಕಗಳನ್ನು ದೀರ್ಘಗೊಳಿಸಿ ಬಳಸಲಾಗಿದೆ.

- ಏಟಿನೆಯಾ ನರಕದಾ ಪು ಅಕುಮ್(೫೭೮–ಬಾದಾಮಿ)
- ಪೊರವ ಗೋಸಾಸಿಗರಾ ಮಾಱು (೭೦೯–ಐಹೊಳೆ)
- ನವಿಲೂರಾ ಸಿರಿಸಂಗದಾಜಿಗಣದಾ(೭೦೦ ಕಿಗ್ಗ)
- ಮೂಜಿನೆಯಾ

೮. ಇಂದು ಪದದ ಆದಿಯಲ್ಲಿ ಇರುವ ಬ ಕಾರಕ್ಕೆ ಬದಲಾಗಿ ಪೂರ್ವದ ಹಳಗನ್ನಡದಲ್ಲಿ ವ ಕಾರ ಬಂದಿದೆ.

- ವಿಟ್ಟಾರ್(೪೫೦–ಹಲ್ಮಿಡಿ)

- ನನ್ದಿಯಾಲರಾ ವಿಟ್ಟದು(೬ನೇ.ಶ.ಸಿರಿಗುಂದ)
- ಆ ವಿತ್ತಿನಲ್ಲಿ ವೆಳೆಯಾದೆ ಕಿಡುಗೆ(೬೮೫-ಶಿಕಾರಿಪುರ)
- ಕಟ್ಟ್ವಿಪ್ಪಿನಾವೆಟ್ಟದುಳ್(೭೦೦-ಶ್ರವಣಬೆಳುಗೊಳ)

೯. ಈಗ ಇ ಮತ್ತು ಉ ಕಾರ ಬಳಕೆಯಾಗುವ ಸ್ಥಾನದಲ್ಲಿ ಎ ಮತ್ತು ಒ ಕಾರ ಬಳಕೆಯಾಗಿರುವದನ್ನು ಕಾಣಬಹುದು.

- ಕೇಕೆಯ ಪಲ್ಲವರಂ ಕಾದೆಜೆದು(೪೫೦-ಹಲ್ಮಿಡಿ)
- ಮುಡಿಯರಾ ಮಗನ್ ಪಲಿಪಱುಎಱುದು(೬೭೫ ಉದ್ಯಾವರ)
- ಮ್ಬಿಡಿ ವಿಟ್ಟಾರ್ ಅದಾನಟಿವೊನ್ಗೆ ಮಹಾಪಾತಕಮ್(೪೫೦-ಹಲ್ಮಿಡಿ)
- ಇದಾನ್ ಪೆಱನೋರ್ವನ್ ಕೊಟ್ಟೋನುಂ ಕೊಡುವೋನುಂ(೬೭೫-ಕಿಗ್ಗ)
- ಎಲಿ-ಇಲಿ, ಕೆಸು-ಕಿಸು, ಮೊಗ್ಗು-ಮೊಗಳು

೧೦. ಈ ಕಾಲಘಟ್ಟದಲ್ಲಿ ಹ ಕಾರಕ್ಕೆ ಬದಲಾಗಿ ಪ ಕಾರವೇ ಬಳಕೆಯಲ್ಲಿರುವುದನ್ನು ಕಾಣಬಹುದಾಗಿದೆ.

- ಅರಸನ್ಗೆ ಬಾಳ್ಗಟ್ಟ್ವ ಪಲ್ಮಡಿ ಉಂ(೪೫೦-ಹಲ್ಮಿಡಿ)
- ಇನ್ದು ಕನಲ್ಗೊಳ್ಳ ನನ್ದಿಯಾಲರಾ ವಿಟ್ಟದು ಪಡೆ(೬ನೇ.ಶ.ಸಿರಿಗುಂದ)
- ಭಂಟಮುಂ ಕವಿಲಿ ಪಾಲುಂ ಎಟ್ಟ್ರಂ (೬೭೫-ಕಿಗ್ಗ)

೧೧. ಪೂರ್ವದ ಹಳಗನ್ನಡದಲ್ಲಿ ದ್ವಿತ್ವವಿರುವುದು ಕಾಲಾನಂತರದಲ್ಲಿ ತನ್ನ ಅಸ್ಥಿತ್ವವನ್ನು ಕಳೆದುಕೊಂಡಿರುವುದನ್ನು ಕಾಣಬಹುದು.

- ವಿಟ್ಟಾರ್ ವಳ್ಳಿಗ್ಗ್ರಾಮೆಯರ(೬೮೫-ಶಿಕಾರಿಪುರ)
- ಸಾಸಿರ್ವ್ವರವ್ವರ ಪೂಜೆದಂದುಯೆ(೭೦೦-ಶ್ರವಣಬೆಳುಗೊಳ)
- ಅವರ್ ಸ್ವರ್ಗ್ಗಗ್ರಮಾನ್ ಏಜೆದಾರ್(೭೦೦-ಶ್ರವಣಬೆಳುಗೊಳ)
- ಸರ್ವ್ವ, ತಲೆಪ್ಪೊರೆ, ಧರ್ಮ್ಮ, ಎರೆತ್ತನಂ ಇತ್ಯಾದಿ.

೧೨. ಪೂರ್ವದ ಹಳಗನ್ನಡದಲ್ಲಿ ರೇಫದ ಹಿಂದಿನ ವ್ಯಂಜನದ ದ್ವಿತ್ವವಿರುವುದನ್ನು ಕಾಣಬಹುದು

- ಅವರ್ ಸ್ವರ್ಗ್ಗಾಗ್ರಮಾನ್ ಏಱಿದಾರ್(೭೦೦-ಶ್ರವಣಬೆಳುಗೊಳ)
- ವಿಟ್ಟಾರ್ ವಳ್ಳಿಗ್ರಾಮೆಯರ(೬೮೫-ಶಿಕಾರಿಪುರ)
- ಸಾಸಿರ್ವ್ವರವ್ವರ ಪೂಜೆದಂದುಯೆ(೭೦೦-ಶ್ರವಣಬೆಳುಗೊಳ)
- ಧರ್ಮ್ಮನಾಯಗನ್

೧೩. ಸಮುಚ್ಚಯದ ಉಂ ಪ್ರತ್ಯಯ ಹಾಗೂ ಅವಧಾರಣೆಯ ಎ ಪ್ರತ್ಯಯಗಳು ಪೂರ್ವದ ಹಳಗನ್ನಡದಲ್ಲಿ ವಿಸಂಧಿ ರೂಪದಲ್ಲಿ ಉಳಿದಿದೆ.

- ಅರಸನ್ಗೆ ಬಾಳ್ಗಟಿಪ್ವ ಪಲ್ಮಡಿ ಉಂ(೪೫೦-ಹಲ್ಮಿಡಿ)
- ಮೂಟಿವಳ್ಳಿಲುಂ

ಉಂ ಪ್ರತ್ಯಯ ಹಳಗನ್ನಡಲ್ಲಿ ಯುಂ ಆಗಿದೆ.

೧೪. ನಪುಂಸಕ ಲಿಂಗ ಪ್ರತ್ಯಯ ಹಳಗನ್ನಡದಲ್ಲಿ ಉದು ಎಂದಿದ್ದರೆ ಪೂರ್ವದ ಹಳಗನ್ನಡದಲ್ಲಿ ಒದು ಎಂದಿದೆ.

- ಮಾಲಾಕಾರರ್ಗ್ಗೆ ಅರ್ದ್ದವೀಸದಿ ಇತ್ತೊದಾನ್

ಈ ಸಾಲಿನಲ್ಲಿನ ಇತ್ತೊದಾನ್>ಇತ್ತೊದು- ಹಳಗನ್ನಡದಲ್ಲಿ ಇತ್ತುದು

ಕೊಟ್ಟೊದು – ಕೊಟ್ಟುದು

೧೫. ಉತ್ತಮ ಪುರುಷ ಬಹುವಚನ ರೂಪದಲ್ಲಿ ಸಮಾವೇಶಕ ಮತ್ತು ಅಸಮಾವೇಶಕ ಎಂಬ ಎರಡು ಬಗೆಯ ರೂಪಗಳು ಪೂರ್ವದ ಹಳಗನ್ನಡದಲ್ಲಿರವಂತೆಯೇ, ಹಳಗನ್ನಡದಲ್ಲೂ ಕಾಣಿಸುತ್ತವೆ.

- ಆಂ(ಎಮ್ಮ,ಎಮಗೆ) ಸಮಾವೇಶಕ
- ನಾಂ(ನಮ್ಮ,ನಮಗೆ) ಅಸಮಾವೇಶಕ

೧೬. ಪೂರ್ವದ ಹಳಗನ್ನಡದಲ್ಲಿ ಪ್ರರ್ಣಕ್ರಿಯಾಪದಗಳಲ್ಲಿ ಕಾಲ, ಲಿಂಗ, ವಚನ, ವಿವಕ್ಷೆ ಇಲ್ಲದ ರೂಪಗಳು ಹೆಚ್ಚು ಬಳಕೆಯಲ್ಲಿವೆ. ಇವು ಕ್ರಿಯಾಧಾತುಗಳಿಗೆ ಕುಂ ಇಲ್ಲವೆ ಗುಂ ಪ್ರತ್ಯಯಗಳೊಡನೆ ಸೇರುತ್ತದೆ.

- ಮಹಾಪಾತಗಮಕ್ಕುಂ(೬ನೇ.ಶ.ಸಿರಿಗುಂದ)
- ತನ್ ಅಕ್ಕುಂ ಇದಾನ್ ಕೊಳೆ(೬೮೫-ಶಿಕಾರಿಪುರ)

೧೭. ಪೂರ್ವದ ಹಳಗನ್ನಡದಲ್ಲಿ ತಮಿಳಿನ ಛಾಯೆ ಸ್ಪಷ್ಟವಾಗಿ ಕಂಡುಬರುತ್ತದೆ.

- ಏಟಿನೆಯಾನರಗದ ಪುಱಂ ಅಕುಮ್(೫೭೮–ಬಾದಾಮಿ)

ಈ ಸಾಲಿನಲ್ಲಿನ ನರಗ ತಮಿಳಿನ ಛಾಯೆಯಾಗಿದ್ದು ಇದರಲ್ಲಿನ ಗ ಕಾರವು ಕನ್ನಡದಲ್ಲಿ ಕ ಕಾರವಾಗುತ್ತದೆ.

- ನರಗ – ನರಕ
- ವೈಕೊನ್ತ – ವೈಕುಂಠ
- ನಾಯಗನ್– ನಾಯಕನ್

೧೮. ಹಳಗನ್ನಡದ ಇಲ್ಲ, ವೈಕುಂಠ, ಆಗುಗೆ, ಆಟಿದಂ, ಲಿಖಿಸಿದಂ ಎಂಬ ಶಬ್ದಗಳು ಪೂರ್ವದ ಹಳಗನ್ನಡದ ಉಚ್ಚಾರಲ್ಲಿ ಇಲ್ಲೆ, ವೈಕೊನ್ತ, ಆಗು, ಆಟಿತ್ತೋನ್, ಲಿಖಿಸಿದೋನ್ ಎಂದಾಗುತ್ತವೆ. ಇವೆಲ್ಲವು ತಮಿಳಿನ ಉಚ್ಚಾರಕ್ಕೆ ಹತ್ತಿರವಾಗಿವೆ.

೧೯. ಹಳಗನ್ನಡದ ವೈಶಿಷ್ಟ್ಯವನ್ನು ಹೊಂದಿರುವ ಕೆಲವು ಪದಗಳನ್ನು ಪಟ್ಟಿ ಮಾಡಬಹುದು.

- ಶಿವಮಾರಂ, ವೀರಾಜ್ಯಂ, ಕೊಟ್ಟಾನ್, ವಿಟ್ಟಾರ್, ಇದಾನ್, ಆಟಿತ್ತೋನ್, ಸಾಸಿರವಿಲಯುಮಾನ್, ಕೊಂದೋನ್, ವೆಟ್ಟದುಳ್, ಅಪೋನ್, ಪುಟ್ಟಿದೊವುಂ, ಮಕ್ಕಳ್.

೨೦. ಕೇಶಿರಾಜನು ಹೇಳುವ ದೇಶೀ ವರ್ಣಗಳಾದ 'ಱ', 'ೞ'ಗಳು ಪೂರ್ವದ ಹಳಗನ್ನಡದಲ್ಲಿಯೇ ಹೆಚ್ಚಾಗಿ ಕಾಣಿಸಿಕೊಳ್ಳುವುದು ಮತ್ತು ಇವು ಉಚ್ಚಾರಣೆಯ ಪ್ರಯೋಗದಲ್ಲಿದ್ದವು.

ಹೀಗೆ ಪೂರ್ವದ ಹಳಗನ್ನಡ ತನ್ನದೇ ಆದ ವಿಶೇಷ ಲಕ್ಷಣಗಳನ್ನು ಹೊಂದಿದೆ. ಈ ಪೂರ್ವದ ಹಳಗನ್ನಡವನ್ನು ಒಂದು ವ್ಯವಸ್ಥೆಯಾಗಿ ಹೇಳಲು ಬಿ.ಎಲ್.ರೈಸ್‌ರವರು ಕೊಡುವ ಆಧಾರಗಳೆಂದರೆ:–

೧. ಕವಿರಾಜಮಾರ್ಗ ಮೊದಲಾದ ಹಳಗನ್ನಡ ಭಾಷೆಯ ಗ್ರಂಥಗಳಲ್ಲಿ ಅವುಗಳ ಕಾಲಕ್ಕೆ ಹಿಂದಿನ ಭಾಷೆಯು ಹಳಗನ್ನಡವೆಂದು ಕರೆಯಲ್ಪಟ್ಟಿರುವುದು. ರೈಸ್‌ರವರ ಅಭಿಪ್ರಾಯದಂತೆ ಹಳಗನ್ನಡಕ್ಕೆ ಹಳಗನ್ನಡವಾದುದೇ ಪೂರ್ವದ ಹಳಗನ್ನಡ.

೨. ಒಂಬತ್ತನೆಯ ಶತಮಾನದಿಂದೀಚೆಗಿನ ಕೆಲವು ಗ್ರಂಥಗಳಲ್ಲಿಯೂ, ಶಾಸನಗಳಲ್ಲಿಯೂ ಕಂಡುಬರದಿರುವ ಕೆಲವು ಭಾಷಾವೈಲಕ್ಷಣಗಳು ಎಂಟನೆಯ ಶತಮಾನದ ಹಿಂದಿನ ಶಾಸನಗಳಲ್ಲಿ ಕಂಡುಬರುವುವು.. ಎಂದರೆ ಹಳಗನ್ನಡ ವ್ಯಾಕರಣ ಪ್ರಕ್ರಿಯೆಗಳಿಂದ ಸಿದ್ಧಿಸದ ಕೆಲವು ಪ್ರಯೋಗಗಳು ಕಂಡುಬರುವುವು.

ಆದರೆ ರೈಸ್‌ರವರ ಈ ವಾದಕ್ಕೆ ಹಲವು ವಿದ್ವಾಂಸರು ವಿರೋಧವನ್ನು ವ್ಯಕ್ತಪಡಿಸಿದ್ದಾರೆ. ಅವುಗಳೆಂದರೆ:–

೧. ಕವಿರಾಜಮಾರ್ಗ ಮೊದಲಾದ ಹಳಗನ್ನಡ ಗ್ರಂಥಗಳಲ್ಲಿ ಪ್ರಯೋಗವಾಗಿರುವ 'ಪಟಿಗನ್ನಡ' ಎಂಬ ಮಾತಿನ ಅರ್ಥವು ಆ ಗ್ರಂಥಗಳ ಕನ್ನಡದಿಂದ ಭಿನ್ನವಾದುದೆಂದು ಇರಲಾರದು. 'ವೇದ' ಎಂಬುದಕ್ಕೆ ಪ್ರತಿಪದವಾದ 'ಪಟಿವಾತು' ಎಂಬ ಮಾತಿನಲ್ಲಿ 'ಪಟಿ' ಎಂಬ ಶಬ್ದಕ್ಕೆ ಇರುವ ಅರ್ಥವೆಂದರೆ ಬಹುಕಾಲದಿಂದಿರುವ, ಪುರಾತನವಾದ ಎಂಬ ಅರ್ಥವು ಪಟಿಗನ್ನಡ ಎಂಬಲ್ಲಿಯೂ ಇರುತ್ತದೆಂದು ಹೇಳಬಹುದು.

೨. ಕ್ರಿ.ಶ.೮ನೇ ಶತಮಾನಕ್ಕೆ ಹಿಂದಿನ ಕನ್ನಡದಲ್ಲಿ ಹಳಗನ್ನಡದಿಂದ ಭಿನ್ನವಾದ ಕೆಲವು ರೂಪಗಳಿರುವುದು ನಿಜ. ಆದರೆ ಹಳಗನ್ನಡ ರೂಪಗಳೂ ಇವೆ. ಅಷ್ಟೇ ಅಲ್ಲ ಅವಕ್ಕಿಂತಲೂ ಇವೇ ಹೆಚ್ಚು.

೩. ರೈಸ್ ಸಾಹೇಬರು ಪೂರ್ವದ ಹಳಗನ್ನಡದಲ್ಲಿದ್ದುವೆಂದು ಹೇಳುವ ರೂಪಗಳು ಹಳಗನ್ನಡದ ರೂಪಕ್ಕಿಂತಲೂ ಹಿಂದಿನವಾಗಿರಬೇಕು. ಅವುಗಳು ವ್ಯತ್ಯಾಸವಾಗಿ ಹಳಗನ್ನಡ ರೂಪಗಳುಂಟಾಗಿರಬಹುದು. ಆದರೆ ನಿಜಾಂಶವು ಇದಕ್ಕೆ ವಿರುದ್ಧವಾಗಿರುವಂತೆ ತೋರಿಸಬಹುದು. ಉದಾಹರಣೆಗೆ ಆನ್ ಪ್ರತ್ಯಯವನ್ನು ತೆಗೆದುಕೊಳ್ಳೋಣ. ಇವರ ಪ್ರಕಾರ ಇದು ಹಳಗನ್ನಡ. ಅನ್ ಪ್ರತ್ಯಯದ ಪೂರ್ವಪದ ಕ್ರಿಯಾಪದಗಳಿಗೆ ಹತ್ತುವ ಪುರುಷವಾಚಕ ಪ್ರತ್ಯಯಗಳು, ಪುರುಷವಾಚಕ ಸರ್ವನಾಮಗಳು ಎಂದು ಗೊತ್ತಾಗಿದೆ. ಆದುದರಿಂದ ಆಸರ್ವನಾಮಗಳ ಆದಿರೂಪಗಳು ಆರ್. ಆಳ್, ಅರ್ ಇತ್ಯಾದಿಯಾಗಿದ್ದಿರಬೇಕು. ಆದರೆ ನಮಗೆ ಅರ್ವಾ, ಅವಳ್ ಮೊದಲಾದ ರೂಪಗಳು ದೊರೆಯುವುದಿಲ್ಲ. ಅಲ್ಲದೆ ತೃತೀಯ ವಿಭಕ್ತಿಗಳಲ್ಲಿ ಎನ್ನ, ಎಮ್ಮ, ಎಮಗೆ ಮೊದಲಾದ ರೂಪಗಳಾಗುತ್ತವೆ. ಇದರಿಂದ ಆರ್ ಎಂಬುದರ ಸ್ವರವು ಹ್ರಸ್ವವಾದುದೆಂದು ಗೊತ್ತಾಗುತ್ತದೆ. ಇದರಿಂದ ನಿಜಾಂಶವು ರೈಸ್ ಸಾಹೇಬರ

ವಾದಕ್ಕೆ ವಿರುದ್ಧವಾದುದೆಂದು ಸ್ಪಷ್ಟವಾಗುತ್ತದೆ. ಅರ್ ಎಂಬುದೇ ಮೂಲರೂಪ. ಆರ್ ಎಂಬುದು ಅದರಿಂದ ಹುಟ್ಟಿದುದು. ಇದು ಮಾತನಾಡುವ ಭಾಷೆಯಲ್ಲಿ ಮಾತ್ರ ಪ್ರಯೋಗದಲ್ಲಿದ್ದು ಸಾಹಿತ್ಯದಲ್ಲಿ ಕ್ವಚಿತ್ತಾಗಿ ಪ್ರಯೋಗವಾಗುತ್ತದೆ.

ರೈಸ್ ಮತ್ತು ಇತರ ವಿದ್ವಾಂಸರ ಅಭಿಪ್ರಾಯಗಳನ್ನು ಗಮನಿಸಿದಾಗ ಪೂರ್ವದ ಹಳಗನ್ನಡ ರೂಪದ ಬಗ್ಗೆ ಒಮ್ಮತವಿಲ್ಲದಿದ್ದರೂ ಪೂರ್ವದ ಹಳಗನ್ನಡಕ್ಕೆ ಒಂದು ರೂಪ ಇರುವುದು ಸ್ಪಷ್ಟವಾಗುತ್ತದೆ. ಮುಂಚೆ ಹೇಳಿದ ಲಕ್ಷಣಗಳಿಂದ ಹಳಗನ್ನಡಕ್ಕೆ ಮುಂಚೆ ಕನ್ನಡಕ್ಕೆ ಒಂದು ವೈಶಿಷ್ಟ್ಯತೆ ಇರುವುದು ಕಾಣಬಹುದು. ಈ ಕಾಲದಲ್ಲಿ ಸಾಕಷ್ಟು ಗ್ರಂಥ ರಚನೆಯಾಗಿದ್ದರು ಶೈಶವಾವಸ್ಥೆಯಲ್ಲಿರುವ ಒಂದು ಭಾಷೆಯ ಲಕ್ಷಣಗಳನ್ನು ಕಾಣಬಹುದು. ಅಧ್ಯಯನದ ದೃಷ್ಟಿಯಿಂದ ಪೂರ್ವ ಹಳಗನ್ನಡ ಬಹಳಷ್ಟು ಮಹತ್ವ ಪೂರ್ಣವಾದುದ್ದಾಗಿದೆ. (ಕನ್ನಡ ಕೈಪಿಡಿ-(ಸಂ)ಮೈಸೂರು ವಿಶ್ವವಿದ್ಯಾನಿಲಯ: ಪು-೩೩೩,೨೩೪)

**ಪೂರ್ವ ಹಳಗನ್ನಡದ ಛಂದಸ್ಸಿನ ಪ್ರಕಾರಗಳು:-**

ಪೂರ್ವ ಹಳಗನ್ನಡವನ್ನು ನಾವು ಕೇವಲ ಶಾಸನಗಳಲ್ಲಿ ಮಾತ್ರ ಕಾಣಬಹುದಾಗಿದೆ. ಈ ಕಾಲಘಟ್ಟದಲ್ಲಿ ಕನ್ನಡದಲ್ಲಿ ರಚಿಸಿರಬಹುದು ಎನ್ನಲಾದ ಯಾವುದೇ ಸಾಹಿತ್ಯ ನಮಗೆ ದೊರೆತಿಲ್ಲ. ಶಾಸನಗಳನ್ನು ಆಧಾರವಾಗಿಟ್ಟುಕೊಂಡು ಭಾಷೆಯ ಅಧ್ಯಯನವನ್ನು ಮಾಡುತ್ತಿದ್ದೇವೆ. ಕ್ರಿ.ಶ.೯ನೇ ಶತಮಾನದಲ್ಲಿ ದೊರೆತ ಕನ್ನಡದ ಮೊದಲ ಕೃತಿಯಾದ ಕವಿರಾಜಮಾರ್ಗದಲ್ಲಿ ಉಕ್ತವಾಗಿರುವ ಕೆಲವು ಅಂಶಗಳಿಂದ ಕನ್ನಡದಲ್ಲಿ ಸಾಹಿತ್ಯ ರಚನೆಯಾಗಿದ್ದು, ಛಂದಸ್ಸಿನ ವೈಶಿಷ್ಟ್ಯವನ್ನು ಹೊಂದಿತ್ತು ಎಂದು ಹೇಳಬಹುದಾಗಿದೆ. ಇದಲ್ಲದೆ ೭ನೇ ಶತಮಾನದ ಬಾದಾಮಿ ಶಾಸನ ಮತ್ತು ಶ್ರವಣ ಬೆಳುಗೊಳ ಶಾಸನಗಳಲ್ಲಿ ಸಾಹಿತ್ಯದ ಗುಣಗಳು ಕಾಣಬರುತ್ತವೆ.

ಬಾದಾಮಿ ಶಾಸನವು ಅನೇಕ ದೃಷ್ಟಿಯಿಂದ ಮಹತ್ವವನ್ನು ಹೊಂದಿದೆ. ಅದರಲ್ಲಿ ಕನ್ನಡಕ್ಕೆ ವಿಶಿಷ್ಟವಾದ ತ್ರಿಪದಿ ಛಂದಸ್ಸಿನ ಪ್ರಥಮ ನಿದರ್ಶನವು ದೊರೆಯುತ್ತದೆ. ಈ ಶಾಸನದಲ್ಲಿ ಮೂರು ತ್ರಿಪದಿಗಳಿವೆ. ಇದರಲ್ಲಿ ಒಂದು ತ್ರಿಪದಿ ಈ ರೀತಿ ಇದೆ.

"ಸಾಧುಗೆ ಸಾಧುಂ ಮಾಧುರ್ಯನ್ಗೆ ಮಾಧುರ್ಯಂ
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್
ಮಾಧವನೀತನ್ ಪೆಱನಲ್ಲ।

ಈ ಶಾಸನದಿಂದ ಜನಪದ ಸಾಹಿತ್ಯವು ಅದಕ್ಕೆ ಹಿಂದಿನಿಂದಲೂ ಬೆಳೆದುಕೊಂಡು ಬಂದಿರಬೇಕೆಂದು ಊಹಿಸಬಹುದು. ಇನ್ನೊಂದು ಶಾಸನದಲ್ಲಿ ನಾಲ್ಕು ಪಾದವುಳ್ಳ ಮತ್ತು ಪ್ರತಿಪಾದದಲ್ಲಿ ೧೭ ಅಕ್ಕರಗಳುಳ್ಳ 'ಸುಮಂಗಲಿ' ಎಂಬ ಅಕ್ಷರ ವೃತ್ತದ ಛಂದಃ ಪ್ರಕಾರವನ್ನು ಕಾಣಬಹುದಾಗಿದೆ. ಈ ವೃತ್ತದ ಒಂದು ಪಾದ ಇಂತಿದೆ.

"ಬಿಣಮಣಿ ಅನ್ತುಭೋಗಿ ಬಿಣದುಳ್ಮಣಿವಿಲ್ಮನದೋನ್"

ಕ್ರಿ.ಶ.ಸು.೮೦೦ರ ಇನ್ನೊಂದು ಶಾಸನದಲ್ಲಿ ಸೈಗೊಟ್ಟ ಶಿವಮಾರನೆಂಬ ಗಂಗರಾಜನು ಶಿವಮಾರ ಮತವೆಂಬ ಗಜಾಷ್ಟಕವನ್ನು ರಚಿಸಿದ್ದನೆಂದೂ, ಅದು ಓವನಿಗೆ, ಒನಕೆವಾಡು ಆಯಿತೆಂಬುದನ್ನು ಬಣ್ಣಿಸಲಾಗಿದೆ. ಈ ಶಾಸನದಲ್ಲಿ ಮೊದಲನೆಯ 'ಗಜಾಷ್ಟಕ' ಎಂಬ ಪದದಿಂದ ಗಜಶಾಸ್ತ್ರವನ್ನು ಕುರಿತು ಎಂಟು ಪದ್ಯಗಳ ಅಷ್ಟಕವೆಂಬ ಚಿಕ್ಕ ಸಾಹಿತ್ಯ ರೂಪದ ಪ್ರಥಮ ಉಲ್ಲೇಖವಿದೆ. ಈ ಗಜಾಷ್ಟಕವು ಓವನಿಗೆ ಮತ್ತು ಒನಕೆವಾಡಾಯಿತು ಎಂಬ ಮಾತಿನಿಂದ ಜನಪದ ಸಾಹಿತ್ಯದಲ್ಲಿ ಈ ರೂಪಗಳು ಆಗಲೇ ಇದ್ದವೆಂದು ತಿಳಿಯುತ್ತದೆ. ಇದರಿಂದ ಓವನಿಗೆ ಮತ್ತು ಒನಕೆವಾಡು ಇವು ಜನಪದ ಸಾಹಿತ್ಯದ ಪ್ರಕಾರಗಳೆಂದು ತಿಳಿಯುತ್ತದೆ. ಆದರೆ ಇದು ಮೂಲತಃ ಯಾವ ಛಂದಸ್ಸಿನಲ್ಲಿತ್ತು ಮತ್ತು ಯಾವ ಅಕ್ಷರ ವೃತ್ತದಲ್ಲಿತ್ತೆಂದು ತಿಳಿದಿಲ್ಲ.

ಇದಲ್ಲದೆ ಕವಿರಾಜಮಾರ್ಗಕಾರ ತನ್ನ ಕೃತಿಯಲ್ಲಿ ಕನ್ನಡ ಕಾವ್ಯದಲ್ಲಿ ಗದ್ಯಪದ್ಯ ಸಮ್ಮಿಶ್ರಿತವಾದ ಒಂದು ಸಾಹಿತ್ಯ ರೂಪವಿದ್ದಿತೆಂದೂ, ಅದನ್ನು ಚಿರಂತನಾಚಾರ್ಯರು 'ಗದ್ಯಕಥಾ ಪ್ರಗೀತಿ' ಎಂಬ ಹೆಸರಿನಿಂದ ಕರೆಯುತ್ತದ್ದರೆಂದು ಹೇಳಿದೆ. ಇಲ್ಲಿ ಚಂಪೂ ಕಾವ್ಯಕ್ಕಿಂತ ಗದ್ಯ ಭಾಗ ಹೆಚ್ಚಾಗಿರುವ ಗದ್ಯ ಕಥೆ ಎಂಬ ಪ್ರಕಾರವಿರಬೇಕೆಂದು ಹೇಳಲಾಗಿದೆ.

ಇದು ಚಂಪೂ ಕಾವ್ಯಕ್ಕೆ ಪ್ರತಿಯಾಗಿ ಕವಿರಾಜಮಾರ್ಗಕಾರ ಈ ಪದವನ್ನು ಅನುಸರಿಸಿಲ್ಲ. ಕಾರಣ ತಾನು ಅನುಸರಿಸಿದ ದಂಡಿಯ ಕಾವ್ಯಾದರ್ಶದಲ್ಲಿ ಗದ್ಯಪದ್ಯ ಮಿಶ್ರವಾದ ಚಂಪೂ ಎಂಬ ಪ್ರಕಾರದ ಉಲ್ಲೇಖವೂ ತನಗೆ ಗೊತ್ತಿದ್ದರೂ ಕವಿರಾಜಮಾರ್ಗಕಾರ ಅದರ ಪ್ರಸ್ತಾಪ ಮಾಡಿಲ್ಲದಿರುವುದನ್ನು ಗಮನಿಸಬಹುದು.

ಈತ ತನ್ನ ಕಾವ್ಯದಲ್ಲಿ ಉಲ್ಲೇಖಿಸಿರುವ ಎರಡು ಸಾಹಿತ್ಯ ರೂಪಗಳೆಂದರೆ ಬೆದಂಡೆ ಮತ್ತು ಚತ್ತಾಣ. ಕನ್ನಡಕ್ಕೆ ವಿಶಿಷ್ಟವಾದ ಈ ರೂಪಗಳ ಲಕ್ಷ್ಯ-ಲಕ್ಷಣಗಳ ವಿಷಯದಲ್ಲಿ ನಮ್ಮ ಜ್ಞಾನವು ಪರಿಮಿತವಾಗಿದೆ. ಇವುಗಳನ್ನು ಉಲ್ಲೇಖಿಸಿರುವ ಮೊದಲ ಪದ್ಯವು ಪೂರ್ತಿಯಾಗಿ ವಿಶದವಾಗಿಲ್ಲ.

" ' ನುಡಿಗೆಲ್ಲಂ ಸಲ್ಲದ ಕ
ನ್ನಡದೊಳ್ ಚತ್ತಾಣಮುಂ ಬೆದಂಡೆಯುಮೆಂದೀ
ಗಡಿನ ನೆಗಟ್ತೆಯ ಕಬ್ಬದೊ
ಳೊಡಂಬಡಂ ಮಾಡಿದರ್ ಪುರಾತನ ಕವಿಗಳ್'

ಈ ಪದ್ಯದಲ್ಲಿ 'ನುಡಿಗೆಲ್ಲಂ ಸಲ್ಲದ ಕನ್ನಡದೊಳ್' ಎಂದರೆ 'ಬೇರೆ ನುಡಿಗಳಿಗೆ ಅಂದರೆ ಇತರ ಭಾಷೆಗಳಲ್ಲಿ ರೂಢವಾಗದ ಅಂದರೆ ತನಗೆ ವಿಶಿಷ್ಟವಾದ ಕನ್ನಡದಲ್ಲಿ' ಎಂದು ಅರ್ಥವಿರಬಹುದು. ಆದರೆ ಇದು ಅಷ್ಟೊಂದು ಸಮಂಜಸವಾಗಿಲ್ಲ. ಆಮೇಲೆ ಚತ್ತಾಣ, ಬೆದಂಡೆ ಇವುಗಳನ್ನು ಪುರಾತನ ಕವಿಗಳು 'ಈಗಡಿನ ನೆಗಟ್ತೆಯ ಕಬ್ಬದೊಳ್ ಒಡಂಬಡಂ ಮಾಡಿದಾರ್' ಎಂದರೆ ಪ್ರಾಚೀನ ಕವಿಗಳು ಈಗಡಿನ ಎಂದರೆ ವರ್ತಮಾನ ಕಾಲದ ಹೆಸರಾದ ಕಾವ್ಯದೊಡನೆ ಅವನ್ನು ಒಡಂಬಡ ಮಾಡಿದರು ಎಂದು ಅರ್ಥೈಸಿದರೆ ಅಷ್ಟೊಂದು ಸಮಂಜಸವಾಗಿಲ್ಲ. ಇಲ್ಲಿ ಈಗಡಿನ ಎಂಬುದನ್ನು ತಮ್ಮ ವರ್ತಮಾನ ಕಾಲದ ಎಂದು ಸಂದರ್ಭವಶವಾಗಿ ವಿವರಿಸಬೇಕಾಗುತ್ತದೆ. ಇದನ್ನು ಸಮರ್ಥವೆಂದು ಭಾವಿಸಿದರೆ ಚತ್ತಾಣ, ಬೆದಂಡೆ ಈ ಸಾಹಿತ್ಯ ರೂಪಗಳು ಕವಿರಾಜಮಾರ್ಗಕ್ಕೆ ಹಿಂದಿನ ಕಾಲದಿಂದಲೇ ಕನ್ನಡದಲ್ಲಿ ಸಲುವಳಿಯಾಗಿದ್ದುವೆಂದೂ, ಅವುಗಳಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿ ಹಳೆಯ ಕವಿಗಳು ತಮ್ಮ ಕಾಲದ ಹೊಸಕಾವ್ಯಕ್ಕೆ ಹೊಂದಿಸಿಕೊಂಡರು ಎಂದು ಹೇಳಬೇಕಾಗುತ್ತದೆ."(ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು-ರಂ.ಶ್ರೀ.ಮುಗಳಿ: ಪು-೭)

ಇದರ ಲಕ್ಷಣವನ್ನು ಗಮನಿಸಿದರೆ ಮೊದಲು ಪೂರ್ತಿ ದೇಶ್ಯವಾಗಿರುವ, ಅವುಗಳಿಗೆ ಛಂದೋ ರೂಪದಲ್ಲಿ ಸಂಸ್ಕೃತದ ಪ್ರಭಾವದಿಂದ ಅಕ್ಷರ ವೃತ್ತಗಳನ್ನು ಅಳವಡಿಸಬಹುದೆಂದು ತೋರುತ್ತದೆ.

೧.ಬೆದಂಡೆ=ಕಂದಗಳು+ವೃತ್ತಗಳು+ಜಾತಿಪದ್ಯಗಳು

೨.ಚತ್ತಣ=ಕಂದಗಳು+ವೃತ್ತಗಳು+ಚವುಪದಿ+ಗೀತಿಕೆ+ತಿವದಿ

ಇವುಗಳನ್ನೆ ತೀ.ನಂ.ಶೀ ಅವರು 'ಚಿತ್ರಾಯನ' ಮತ್ತು 'ವೈದಂಡಿಕ' ಎಂದು ವಿವರಿಸಿದ್ದಾರೆ.ಪದ್ಯ ಜಾತಿಯಲ್ಲಿ ಪ್ರಾಕೃತ ಛಂದೋಗತಿಯ ಪದ್ಯಗಳು(ಜಾತಿ ಪದ್ಯಗಳು) ಸೇರಿದ್ದರೆ ಅದು ವೈದಂಡಿಕ; ಇದರಲ್ಲಿ ಕನ್ನಡ ದೇಸೀ ಪದ್ಯಗಳಿರುವುದಿಲ್ಲ. ಚತ್ತಾಣ ಅಥವಾ ಚಿತ್ರಾಯನವೆಂದರೆ ಕನ್ನಡದ ದೇಸೀ ಪದ್ಯಗಳು ಸೇರಿ ಪ್ರಾಕೃತದ ಇತರ ಛಂದಸ್ಸುಗಳು ಇರುವುದಿಲ್ಲ. ಆದರೆ ಇದುವರೆಗೆ ಇಂತಹ ನಿರ್ದಿಷ್ಟ ಕಾವ್ಯವೊಂದು ಕನ್ನಡದಲ್ಲಿ ದೊರೆತಿಲ್ಲ. ಆಂಡಯ್ಯನ 'ಕಬ್ಬಿಗರ ಕಾವ'(ಪದ್ಯ೧೪೪) ಮತ್ತು ಮಲ್ಲಕಾರ್ಜುನನ 'ಸೂಕ್ತಿ ಸುಧಾರ್ಣವ'(೮.೧೩೪)ದಲ್ಲಿ ಬೆದಂಡೆಯನ್ನು ಹಾಡುವ ವಾಡಿಕೆಯಿತ್ತೆಂದು ಹೇಳಲಾಗಿದೆ. ಉದಯಾದಿತ್ಯಾಲಂಕಾರದಲ್ಲಿ ಚಂಪೂ ಕಾವ್ಯ ಪ್ರಕಾರ ಹೇಳುವಾಗ ಚತ್ತಾಣ, ವೈದಂಡಿಕದ ಬಗ್ಗೆ ಪ್ರಸ್ತಾಪವಾಗಿರುವುದು ಗಮನಾರ್ಹವಾಗಿದೆ.

'ಕನ್ನಡದೊಳ್ ಚಂಪೂಕೃತಿ-।
ಸನ್ನುತತರ ವಚನಕಾವ್ಯಮೆನಿಕುಂ ಚತ್ತಾ॥
ಣಂ ನೆಱೆವೈದಂಡಿಕಮೆನೆ।
ಸನ್ನುತಿಯಂ ಸರ್ಗಬಂಧಕೃತಿ ತಳೆದಿರ್ಕುಂ॥

"ಇದರಲ್ಲಿ ಸರ್ಗಂಬಧಂ ಕೃತಿ ಸನ್ಮತಿಯನ್ನು ತಳೆದಿರುತ್ತದೆ ಎಂಬ ಉಕ್ತಿಯಲ್ಲಿ ಚತ್ತಾಣ-ಬೆದಂಡೆಗಳ ಉಲ್ಲೇಖವು ಗಮನಾರ್ಹವಾದರೂ ಸರ್ಗಬಂಧ ಕೃತಿಗೂ ಎಂದರೆ ಸಂಸ್ಕೃತ ಲಕ್ಷಣದ ಮಹಾಕಾವ್ಯಕ್ಕೂ, ದೇಸೀಗಬ್ಬದ ಈ ಪ್ರಕಾರಗಳಿಗೂ ಜೋಡಿಸಿದ ಸಂಬಂಧ ವಿಚಿತ್ರವಾಗಿ ಕಾಣುತ್ತದೆ. 'ಚಂಪೂವಿಗಿಂತ ಭಿನ್ನವಾದ 'ಸರ್ಗಬಂದ ಕೃತಿ'ಯಲ್ಲಿ ಎಂದರೆ ಪದ್ಯಗಳನ್ನು ಮಾತ್ರ ಉಳ್ಳ ಕಾವ್ಯದಲ್ಲಿ ಚತ್ತಾಣ, ವೈದಂಡಿಕ ಎಂಬುವು ಪ್ರಭೇದಗಳು' ಎಂದು ತೀ.ನಂ.ಶ್ರೀಯವರು ಈ ಪದ್ಯಭಾಗವನ್ನು ಹೇಳಿದ್ದಾರೆ."(ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು-ರಂ.ಶ್ರೀ.ಮುಗಳಿ. ಪು-೧೫).

ಕವಿರಾಜಮಾರ್ಗದಲ್ಲಿ 'ಪಗರಣ' ಎಂಬ ಶಬ್ದವೂ ಕೆಳಗಿನ ಪದ್ಯದಲ್ಲಿ ಕಾಣಬಹುದು

'ಮಿಗೆ ದುಷ್ಕರಕಾವ್ಯಂಗಳೊ।
ಳಗರ್ಹಿತ-ಪ್ರಾಯಮಕ್ಕುಮಾ ಶ್ರುತಿಕಷ್ಟಂ॥
ಪಗರಣದೊಳುಟಿದ ಮೂಱುಂ।
ನಗಿಸುಗುಮಪ್ಪುದಜೆನಲ್ಲಿಗಂತವ ದೋಷಂ॥

"ಸಂಸ್ಕೃತ ನಾಟಕದ ಹತ್ತು ಪ್ರಕಾರಗಳಲ್ಲಿ ಪ್ರಕರಣ ಒಂದಾಗಿದೆ. 'ಪಗರಣವು' 'ಪ್ರಕರಣದ' ತದ್ಭವ ರೂಪವಾಗಿರಬಹುದು. ಕವಿಕಲ್ಪಿತವಾದ ಲೌಕಿಕ ವೃತ್ತ ಮುಂತಾದ ಲಕ್ಷಣಗಳಿಂದ ಕೂಡಿರುವುದಕ್ಕೆ ಪ್ರಕರಣ ಎನ್ನುತ್ತಾರೆ. ಮೃಚ್ಛಕಟಿಕ, ಮಾಲತೀ ಮಾಧವ ಇವು ಅದಕ್ಕೆ ಉದಾಹರಣೆಗಳು. ನಾಲ್ಕು ಕಾವ್ಯದೋಷಗಳಲ್ಲಿ 'ಶ್ರುತಿ ಕಷ್ಟ' ಎಂಬ ದೋಷವು ದುಷ್ಕರ ಶ್ರುತಿಕಷ್ಟ, ಅರ್ಥಕಷ್ಟ, ಕಲ್ಪನೋಕ್ತಿಕಷ್ಟ ಎಂದು ಕವಿರಾಜಮಾರ್ಗದಲ್ಲಿಯ ಮೇಲಿನ ಪದ್ಯದ ಅಭಿಪ್ರಾಯ. ಇಲ್ಲಿ ಪಗರಣ ಎಂದರೆ ಹಾಸ್ಯ ಪ್ರಧಾನ ನಾಟಕ ಎಂದು ಸಾಂದರ್ಭಿಕವಾಗಿ ಸೂಚಿತವಾಗಿದೆ. ಸಂಸ್ಕೃತದ ಪ್ರಕರಣ ಲಕ್ಷಣದಲ್ಲಿ ಶೃಂಗರವು ಅಂಗಿ ಎಂದರೆ ಪ್ರಧಾನ ರಸವಾಗಿರಬೇಕು ಎಂದಿದೆ. ಹಾಸ್ಯವು ಅದಕ್ಕೆ ಪೋಷಕವಾಗಿ ಬರಬಹುದು. ಆದರೆ ಕವಿರಾಜಮಾರ್ಗಕಾರನು ತನ್ನ ಕಾಲದಲ್ಲಿ ಕನ್ನಡ ನಾಡಿನಲ್ಲಿ ಪ್ರಚಾರದಲ್ಲಿದ್ದ ಹಾಸ್ಯ ಪ್ರಧಾನ ಪ್ರಹಸನಗಳಿಗೆ ಪಗರಣ ಎಂಬ ಪದವನ್ನು ಬಳಸಿರುವಂತೆ ತೋರುತ್ತದೆ.. 'ವಡ್ಡಾರಾಧನೆ'ಯಲ್ಲಿ ನಕಲಿ ನಾಟಕ, ನಕಲಿಯ ಪಾತ್ರ ಎಂಬ ಅರ್ಥದಲ್ಲಿ 'ಪಗರಣ' 'ಪಗರಣಿಗ' ಎಂಬ ಮಾತುಗಳು ಪ್ರಯೋಗವಾಗಿವೆ. ಆದರೆ ಇದರ ಬಗ್ಗೆ ಸ್ಪಷ್ಟವಾದ ಮಾಹಿತಿ ಅಲಭ್ಯವಾಗಿದೆ."(ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು-ರಂ.ಶ್ರೀ.ಮುಗಳಿ: ಪು-೧೧)

ಹೀಗೆ ಪೂರ್ವದ ಹಳಗನ್ನಡದಲ್ಲಿನ ಕನ್ನಡ ಛಂದಃ ಪ್ರಕಾರಗಳು ಶಾಸನಗಳಲ್ಲಿ ಮತ್ತು ಇತರೆ ಛಂದೋ ಗ್ರಂಥಗಳಲ್ಲಿ ಅದರ ಎಳೆಗಳು ದೊರೆಯುತ್ತವೆಯಾದರೂ, ಸಂಪೂರ್ಣವಾದ ಸಾಹಿತ್ಯ ಗ್ರಂಥ ದೊರೆಯದೇ ಇರುವುದು ವಿಶಾದನೀಯ.

# (ಆ). ಹಳಗನ್ನಡ

ಕನ್ನಡ ಸಾಹಿತ್ಯದ ದೃಷ್ಟಿಯಿಂದ ಈ ಸಾಹತ್ಯ ಕಾಲಘಟ್ಟವು ಬಹಳ ಮಹತ್ವ ಪೂರ್ಣದ್ದಾಗಿದೆ. ಕಾರಣ ಈ ಕಾಲಘಟ್ಟದಲ್ಲಿ ದೊರೆತ ಪಂಪನ ಪಂಪ ಭಾರತ ಅಥವಾ ವಿಕ್ರಮಾರ್ಜುನ ವಿಜಯಂ ಕನ್ನಡ ಸಾಹಿತ್ಯದ ಮೊದಲ ಗ್ರಂಥವಾಗಿದೆ. ಕವಿರಾಜಮಾರ್ಗವು ಕನ್ನಡದಲ್ಲಿ ದೊರೆತ ಮೊದಲನೆಯ ಲಭ್ಯ ಗ್ರಂಥವಾದರೂ ಇದು ಲಕ್ಷಣ ಗ್ರಂಥ. ಸಾಹಿತ್ಯ ಕೃತಿಯಲ್ಲ. ಅಲ್ಲದೆ ಈ ಕಾಲದಲ್ಲಿ ಅನೇಕ ಮಹತ್ವದ ಮತ್ತು ವ್ಯಾಕರಣ ಬದ್ಧವಾದ ಕನ್ನಡ ಕೃತಿಗಳು ದೊರೆತಿವೆ. ಈ ಕಾಲದಲ್ಲಿ ವಿಪುಲವಾಗಿದ್ದ ಕನ್ನಡ ದೇಶೀ ಪ್ರಭೇದಗಳ ಕೆಲವು ವೈಲಕ್ಷಣ್ಯಗಳನ್ನು ಕಳೆದುಕೊಂಡು ಏಕರೂಪತೆಯನ್ನು ಪಡೆದಿದ್ದು, ಪಂಡಿತ ವರ್ಗದಲ್ಲಿ ಪ್ರಚಾರದಲ್ಲಿತ್ತು. ಪಂಡಿತ ಕವಿಗಳಿಂದ ಮಾನ್ಯತೆಯನ್ನು ಪಡೆದಿದ್ದ ಈ ಶಿಷ್ಟ ಭಾಷೆ ಸಾಹಿತ್ಯ ಹಾಗೂ ವ್ಯಾಕರಣ ಶಾಸ್ತ್ರಗಳ ಮಾಧ್ಯಮವಾಗಿತ್ತು. ಈ ಭಾಷೆಯನ್ನೇ ನಾವು ಇಂದು ಹಳಗನ್ನಡವೆಂದು ಕರೆಯುತ್ತೇವೆ.

ಕನ್ನಡ ಭಾಷೆಯನ್ನು ಕುರಿತು ಪಂಪನು 'ರಾಜದ್ರಾಜಕಮೆನಿಸಿದ ಸಾಜದ ಪುಲಿಗೆಱೆಯ ತಿರುಳ ಕನ್ನಡದೊಳ್' ಎಂಬುದಾಗಿಯೂ, ರನ್ನನು 'ಕನ್ನಡ ಮೆರಡುಱುನೂಱಱ ಕನ್ನಡ ಮಾತಿರುಳ ಕನ್ನಡಂ' ಎಂದು ಹೇಳಿದ್ದಾರೆ. ಈ ಕಾಲದಲ್ಲಿ ಪಂಪ,ರನ್ನ, ಜನ್ನ, ನಾಗವರ್ಮ ಮುಂತಾದ ಮಹಾನ್ ಕವಿಗಳು ಹಲವು ಮಹತ್ವದ ಕೃತಿಗಳನ್ನು ಕನ್ನಡದಲ್ಲಿ ರಚಿಸಿರುವುದಾಗಿ ತಿಳಿಸಿದ್ದರೂ ಸಂಪೂರ್ಣವಾಗಿ ಇವು ದೊರೆತಿಲ್ಲ. ಆದರೆ ಸಾಹಿತ್ಯವು ವಿಫುಲವಾಗಿ ಬೆಳೆದಿತ್ತೆಂಬುದು ಸ್ಪಷ್ಟವಾಗಿ ದೊರೆತಿರುವ ಆಧಾರಗಳಿಂದ ತಿಳಿಯುತ್ತದೆ. ರೈಸ್ ಮತ್ತು ಕಿಟೆಲ್ ಇಬ್ಬರೂ ಹಳಗನ್ನಡ ಕುರಿತು ಪ್ರಸ್ತಾಪ ಮಾಡಿದ್ದಾರೆ. ಆದರೂ ಕಾಲವನ್ನು ಗುರುತಿಸುವಲ್ಲಿ ಭಿನ್ನಾಭಿಪ್ರಾಯಗಳಿವೆ. ರೈಸ್‌ರವರು ೮ ರಿಂದ ೧೪ನೇ ಶತಮಾನದವರೆಗೆ ಹಳಗನ್ನಡವನ್ನು ಗುರುತಿಸಿದರೆ, ಕಿಟೆಲ್‌ರವರು ೯ ರಿಂದ ೧೨೫೦ನೇ ಶತಮಾನದವರೆರಗೆ ಹಳಗನ್ನಡ ಕಾಲವನ್ನು ಗುರುತಿಸಿದ್ದಾರೆ.

ಪೂರ್ವದ ಹಳಗನ್ನಡದಲ್ಲಿ ವರ್ಣ ವ್ಯವಸ್ಥೆಯಲ್ಲಿನ ಒಂದು ನಿರ್ದಿಷ್ಟ ರೂಪವನ್ನು ಕೇಶಿರಾಜನು ನೀಡಿದ್ದನು. ಇದರ ಜೊತೆಗೆ ವ್ಯಾಕರಣದ ಹಿನ್ನಲೆಯಲ್ಲಿ

ಹಲವಾರು ಬದಲಾವಣೆಗಳನ್ನು ಕಾಣಬಹುದು. ಹಳಗನ್ನಡ ಭಾಷೆಯ ವೈಶಿಷ್ಟ್ಯಗಳು ಈ ಕೆಳಕಂಡಂತಿವೆ.

೧. ವರ್ಣಮಾಲೆ:– ಕೇಶಿರಾಜನು ಅಚ್ಚಗನ್ನಡದಲ್ಲಿ ೪೭ ಅಕ್ಷರಗಳಿವೆಯೆಂದು ಹೇಳುತ್ತಾನೆ. ಸಂಸ್ಕೃತದ ೫೨ ವರ್ಣಗಳಲ್ಲಿ ೧೦ ಅಕ್ಷರಗಳು ಕನ್ನಡದಲಿಲ್ಲವೆಂದು ಹೇಳಿ ಇದರ ಜೊತೆಗೆ ಕನ್ನಡದ ದೇಶಿ ವರ್ಣಗಳನ್ನು ಸೇರಿಸಿದ್ದಾನೆ. ಇವನು ಹೇಳುವ ದೇಶಿ ವರ್ಣಗಳು ಒಟ್ಟು ೫. ಅವುಗಳೆಂದರೆ 'ಱ', 'ೞ', 'ಕುಳ', 'ಎ' ಮತ್ತು 'ಒ'.

ಸ್ವರಗಳು –೧೨

ವ್ಯಂಜನಗಳು–೨೫

ಅವರ್ಗೀಯ ವ್ಯಂಜನಗಳು–೦೯

ಅನುಸ್ವಾರ–೦೧

ಒಟ್ಟು–೪೭

ಆದರೆ ಈಗಲೂ ಸಂಸ್ಕೃತ ವರ್ಣಗಳು ಅನಿವಾರ್ಯ ಕಾರಣದಿಂದ ಕನ್ನಡ ವರ್ಣಮಾಲೆಯಲ್ಲಿವೆ. ಕಾರಣ ಸಂಸ್ಕೃತ ಶಬ್ದಗಳು ಈಗಲೂ ಕನ್ನಡದಲ್ಲಿವೆ.

ಉದಾ:– ಋ(ಋಷಿ), ಶ(ಶಕುನ), ಷ(ಆಷಾಢ), ಃ ವಿಸರ್ಗ(ಅತಃಕರಣ)

೨. ಱ,ೞ– ಕೇಶಿರಾಜನು ಹೇಳಿದ ೪೭ ಅಕ್ಷರಗಳಲ್ಲಿ ಇವು ದೇಶ್ಯ ವರ್ಣಗಳು. ಇವು ಪೂರ್ವದ ಹಳಗನ್ನಡದಲ್ಲೂ ಬಳಕೆಯಾಗಿದ್ದರೂ ಹಳಗ್ನಡದಲ್ಲಿ ಸ್ವತಂತ್ರ ವರ್ಣಗಳಾಗಿದ್ದವು. ಈ ಅಕ್ಷರಗಳ ವ್ಯತ್ಯಾಸದಿಂದ ಅನೇಕ ವೇಳೆ ಶಬ್ದಗಳ ಅರ್ಥವೇ ವ್ಯತ್ಯಾಸವಾಗುತ್ತದೆ.

| ಉದಾ:– ಕಾರಕ್ಕೆ | ಅರಿ–ಕತ್ತರಿಸು | ಅಱಿ –ತಿಳಿ |
| --- | --- | --- |
| | ಕೊರೆ–ಗೊರಕೆ ಹಾಕು | ಕೊಱೆ –ಕತ್ತರಿಸು |
| | ಒರೆ–ಉಜ್ಜು | ಒಱೆ –ಸ್ರವಿಸು, ಸುರಿ |
| ಕಾರಕ್ಕೆ | ಆಳ್–ಸೇವಕ | ಆೞ್ –ಮುಳುಗು |
| | ತಳೆ– ಹೊಂದು | ತೞೆ – ಛತ್ರಿ |
| | ಬಾಳ್–ಕತ್ತಿ | ಬಾೞ್ –ಜೀವನ |

ಇತ್ತೀಚೆಗೆ ಇದು ನಿಂತು ಹೋಗಿ 'ೞ' ಕ್ಕೆ ಬದಲಾಗಿ 'ಳ' ವೂ, 'ಱ' ಕ್ಕೆ ಬದಲಾಗಿ 'ರ' ವೂ ಬಳಕೆಯಲ್ಲಿದೆ. ಇದರ ಬಳಕೆ ಮತ್ತು ಉಚ್ಚಾರ ನಿಂತು ಹೋಗಿರುವುದರಿಂದ ಹಾಗೂ ಬರವಣಿಗೆಯಲ್ಲಿ ಉಳಿದಿರುವುದರಿಂದ 'ೞ'ಕ್ಕೆ ರಳ ಎಂದೂ 'ಱ' ಕ್ಕೆ ಶಕಟರೇಫ 'ರ' ಎಂದೂ ಹೆಸರಾಯಿತು. ಇದರ ಜೊತೆಗೆ ಅಚ್ಚಗನ್ನಡ ಶಬ್ದಗಳಲ್ಲಿರುವ 'ಳ'ಕ್ಕೆ ಕುಳವೆಂದು, ಸಂಸ್ಕೃತ ಶಬ್ದದಲ್ಲಿರುವ 'ಲ'ಕ್ಕೆ ಪ್ರತಿಯಾಗಿ ಬರುವ 'ಳ'ಕ್ಕೆ ಕ್ಷಳವೆಂದೂ ಕರೆಯಲಾಯಿತು.

೩. ಈಗ ಳಾಂತವಾಗಿರುವ ಕೆಲವು ಶಬ್ದಗಳು ಹಳಗನ್ನಡದಲ್ಲಿ ಲಕಾರವಾಗಿದ್ದವು ಮತ್ತು ಇವು ವ್ಯಂಜನಾಂತವಾಗಿರುವುದನ್ನು ಕಾಣಬಹುದು.

ಬೆರಲ್ – ಬೆರಳು

ಕೊರಲ್ – ಕೊರಳು

ಒರಲ್ – ಒರಳು

ಮರಲ್ – ಮರಳು

೪. ಪೂರ್ವದ ಹಳಗನ್ನಡದಲ್ಲಿ ನ ಕಾರವಿದ್ದರೆ ಹಳಗನ್ನಡದಲ್ಲಿ ಬಿಂದು ಸಹಿತವಾಗಿದೆ. ಈಗ ಇದು ಬಿಂದು ರಹಿತವಾಗಿದೆ

ಅವನ್ಗೆ – ಅವಂಗೆ – ಅವಗೆ

ಬೆಡನ್ಗು – ಬೆಡಂಗು – ಬೆಡಗು

ಸಿಡುನ್ಬು – ಸಿಡುಂಬು– ಸಿಡುಬು

ಮಿನ್ಟು – ಮೀಂಟು – ಮೀಟು

೫. ಹಳಗನ್ನಡದಲ್ಲಿ ರೇಫಯುಕ್ತವಾಗಿದ್ದ ಒತ್ತಕ್ಷರಗಳು ಈಗ ಸಜಾತೀಯ ಸಂಯುಕ್ತ ವ್ಯಂಜನಗಳಾಗಿವೆ.

ಉರ್ದು – ಉದ್ದು

ನರ್ಗು – ನಗ್ಗು

ಕುರ್ಗು – ಕುಗ್ಗು

ತಿರ್ದು – ತಿದ್ದು

೬. ಶಬ್ದಗಳ ಅಂತ್ಯದಲ್ಲಿ ನ, ಣ, ಯ, ರ, ಳ, ೞ, ಱ ಗಳು ಹಳಗನ್ನಡದಲ್ಲಿ ವ್ಯಂಜನ ರೂಪದಲ್ಲಿಯೇ ನಿಲ್ಲುತ್ತಿದ್ದವು. ಇವುಗಳು ಇ,ಉ ಗಳು ಸೇರಿ ಹೊಸಗನ್ನಡದಲ್ಲಿ ಸ್ವರಾಂತ ಶಬ್ದಗಳಾಗಿವೆ

ಸಾಯ್ – ಸಾಯಿ

ಉಸಿರ್ – ಉಸಿರು

ಪಾಲ್ – ಪಾಲು

ಜಾಣ್ – ಜಾಣ

ಬಸಿಱ್ – ಬಸಿರು

ಪೊಗೞ್ – ಪೊಗಳು

ಕೆಲವು ಶಬ್ದಗಳು ಮಾತ್ರ ಮೊದಲಿನಿಂದಲೂ ಉಕಾರಾಂತಗಳಾಗಿಯೇ ಉಳಿದಿದೆ– ಕಱು , ತುಱು , ಪುೞು.

೭. ವಿಭಕ್ತಿ ಪ್ರತ್ಯಯ ಕುರಿತು ಕೇಶಿರಾಜನು ಸಾಕಷ್ಟು ಚರ್ಚೆ ಮಾಡಿದ್ದಾನೆ.

| ವಿಭಕ್ತಿ | – ಪ್ರತ್ಯಯ (ಹಳಗನ್ನಡ) | – ಪ್ರತ್ಯಯ (ಆಧುನಿಕ) |
|---|---|---|
| ಪ್ರಥಮಾ | – ಮ್ | – ಉ |
| ದ್ವಿತೀಯಾ | –ಅಂ(ಅನ್) | – ಅನ್ನು |
| ತೃತೀಯಾ | –ಇಂ(ಇನ್),ಇಂದಂ– ಇಂದೆ, ಎ | ಇಂದ |
| ಚತುರ್ಥಿ | –ಗೆ, ಕೆ, ಕ್ಕೆ | – ಗೆ |
| ಪಂಚಮಿ | –ಅತ್ತಣಿಂ(ಅತ್ತಣಿನ್)– ಅತ್ತಣಿಂದ,ಅತ್ತಣಿಂದೆ | ದೆಸೆಯಿಂದ |
| ಷಷ್ಠೀ | – ಅ | – ಅ |
| ಸಪ್ತಮಿ | – ಒಳ್, ಅಲ್ಲಿ | – ಅಲ್ಲಿ |

ಹಳಗನ್ನಡದಲ್ಲಿ ಪ್ರಥಮ ವಿಭಕ್ತಿಗೆ ಪ್ರತ್ಯಯವಿರುವಂತೆ ಕಾಣುವುದಿಲ್ಲ. ಪ್ರತೃತಿಯೇ ಪ್ರಥಮಾ ವಿಭಕ್ತಿ ರೂಪವಾಗುತ್ತದೆ.ಉದಾ:– ಕಲ್, ಕುಱು, ತುಱು, ಗುರುಗಳ್

೮. ಕೆಲವು ಶಬ್ದಗಳು ಹಳಗನ್ನಡದಲ್ಲಿ ಅಕಾರಾಂತವಾಗಿ ನಿಲ್ಲುವುದಿಲ್ಲ. ಅವುಗಳ ಕೊನೆಯಲ್ಲಿ ಸಾಮಾನ್ಯವಾಗಿ ಪುಲ್ಲಿಂಗದಲ್ಲಿ 'ನ್', ನಪುಂಸಕದಲ್ಲಿ 'ಮ್' ಸೇರಿರುತ್ತದೆ.

ರಾಜನ್ – ರಾಜ

ಅರಸನ್ – ಅರಸ

ಮರಮ್ – ಮರ

ಕೆಲವು ನಪುಂಸಕ ಲಿಂಗ ಶಬ್ದಗಳಿಗೆ ಮ್ ಗೆ ಬದಲಾಗಿ ನ್ ಸೇರಿರುವುದುಂಟು

ಮರಮ್ – ಮರನ್

ಕೊಳಮ್ – ಕೊಳನ್

ಕೋಣಮ್– ಕೋಣನ್

"ಶಬ್ದಗಳ ಅಥವಾ ಪ್ರತ್ಯಯಗಳ ಅಂತ್ಯದಲ್ಲಿರುವ ನ್, ಮ್‌ಗಳಿಗೆ ಬದಲಾಗಿ ಅನುಸ್ವಾರವನ್ನು ಉಪಯೋಗಿಸುವುದು ಬಳಕೆಯಲ್ಲಿದ್ದುದರಿಂದಲೂ ಅಂತ್ಯ ಮ್, ನ್, ದ್ವಿತೀಯಾ ವಿಭಕ್ತಿ ಅನ್, ತೃತೀಯೆಯ ಇನ್, ಪಂಚಮಿಯ ಅತ್ತಣಿನ್ ಇವನ್ನು ಕ್ರಮವಾಗಿ ಮ್, ಅಮ್, ಇಮ್, ಅತ್ತಣಿಮ್ ಎಂದು ಉಚ್ಚರಿಸುವ ರೂಢಿಯಲ್ಲಿದ್ದುದನ್ನು ಕಾಣಬಹುದು."(ಹಳಗನ್ನಡದ ವ್ಯಾಕರಣ–ಕನ್ನಡ ಕೈಪಿಡಿ ಪುನರ್ ಮುದ್ರಿತ–ಮೈ.ವಿ.ವಿ: ಪು.೫೧)

೯. ಕನ್ನಡದಲ್ಲಿ ಸಹಜವಾಗಿ ಪಂಚಮಿಯ ವಿಭಕ್ತಿಯ ಕೆಲಸವನ್ನು ತೃತೀಯ ವಿಭಕ್ತಿಯೇ ನಡೆಸುತ್ತದೆ ಮತ್ತು ಒಂದೇ ಅರ್ಥವನ್ನು ಕೊಡುತ್ತದೆ. ಪಂಚಮಿ ವಿಭಕ್ತಿ ಪ್ರತ್ಯಯವೆಂಬುದು ಅತ್ತ ಎಂಬ ದಿಗ್ವಾಚಕಕ್ಕೆ ಇಂ, ಇಂದಂ, ಇಂದೆ ಎಂಬ ತೃತೀಯ ವಿಭಕ್ತಿ ಪ್ರತ್ಯಯಗಳು ಸೇರಿ ಆಗಿದೆ. ದೆಸಿಯಿಂದ ಅಥವಾ ಅತ್ತಣಿಂ ಸಂಸ್ಕೃತದಿಂದ ಬಂದುದ್ದಾಗಿದ್ದು ಇದನ್ನು ಬಳಸಿ ಕನ್ನಡದಲ್ಲಿ ವಾಕ್ಯ ಪ್ರಯೋಗ ಮಾಡುವುದಿಲ್ಲ.

ಉದಾ:– ರಾಮನ ದೆಸಿಯಿಂ ರಾವಣನು ಕೊಲ್ಲಲ್ಪಟ್ಟನು.

ರಾಮನಿಂದ ರಾವಣನು ಕೊಲ್ಲಲ್ಪಟ್ಟನು

ಈ ವಾಕ್ಯವನ್ನು ಇನ್ನೂ ಸರಳ ರೀತಿಯಲ್ಲಿ ಬಳಸಬಹುದಾಗಿದೆ. ಈ ವಾಕ್ಯದಲ್ಲಿ ತೃತೀಯ ವಿಭಕ್ತಿಯ ಬದಲಿಗೆ ಪ್ರಥಮ ವಿಭಕ್ತಿ ಮತ್ತು ರಾವಣ ಶಬ್ದದ ಜೊತೆಗೆ ದ್ವಿತೀಯ

ವಿಭಕ್ತಿಯನ್ನು ಸೇರಿಸಿ ಬದಲಾವಣೆಯನ್ನು ಕಾಣಬಹುದು. ಇದರ ಜೊತೆಗೆ ಕನ್ನಡದಲ್ಲಿ 'ಅಲ್ಪಡು' ಹೆಚ್ಚಾಗಿ ಬಳಕೆಯಾಗಿಲ್ಲ.

ಉದಾ:- ರಾಮನು ರಾವಣನನ್ನು ಕೊಂದನು

೧೦. ಹಳಗನ್ನಡದಲ್ಲಿ ಪುಲ್ಲಿಂಗ ಶಬ್ದಗಳು ಸ್ತ್ರೀಲಿಂಗ ಶಬ್ದಗಳಾಗಿ ಬದಲಾವಣೆ ಹೊಂದುವಾಗ ನ್ ಕಾರಕ್ಕೆ ಬದಲಾಗಿ ಇ, ಎ ಎಂಬ ಪ್ರತ್ಯಯಗಳು ಸೇರುತ್ತವೆ.

ಅರಸನ್ – ಅರಸಿ

ನಿಡುಮೂಗನ್– ನಿಡುಮೂಗಿ

ಜಾಣನ್ – ಜಾಣೆ

ಚದುರನ್ – ಚದುರೆ

ಅಲರ್ಗಣ್ಣನ್ – ಅಲರ್ಗಣ್ಣೆ

ಇನ್ನೂ ಕೆಲವು ಕಡೆಗಳಲ್ಲಿ ಅನ್ ಗೆ ಬದಲಾಗಿ ಇತಿ, ತಿ, ಎಂಬ ಪ್ರತ್ಯಯವು ಸೇರುತ್ತದೆ

ಕನ್ನಡಿಗನ್ – ಕನ್ನಡಿಗಿತಿ

ಒಕ್ಕಲಿಗನ್ – ಒಕ್ಕಲಿಗಿತಿ

ಗಾಡಿಕಾಱನ್ – ಗಾಡಿಕಾರ್ತಿ

ಬಳೆಗಾಱನ್ – ಬಳೆಗಾರ್ತಿ

೧೧. ಹಳಗನ್ನಡದಲ್ಲಿ ಅಖ್ಯಾತ ಪ್ರತ್ಯಯಗಳ ಸ್ವರ ಹ್ರಸ್ವವಾಗಿದೆ. ಇದು ಪೂರ್ವದ ಹಳಗನ್ನಡದಲ್ಲಿ ದೀರ್ಘವಾಗಿದ್ದು ಬದಲಾವಣೆಯನ್ನು ಹೊಂದಿದೆ.

ಸಂದನ್ – ಸಂದಾನ್

ಕೊಂದೆನ್ – ಕೊಂದೋನ್

ಪಡೆದನ್ – ಪಡೆದಾನ್

ಕೊಟ್ಟರ್ – ಕೊಟ್ಟೋರ್

೧೨. ದ್ವಿತೀಯ ವಿಭಕ್ತಿ ಪ್ರತ್ಯಯದ ಸ್ವರ ಪೂರ್ವದ ಹಳಗನ್ನಡದಲ್ಲಿ ದೀರ್ಘವಾಗಿದ್ದರೆ, ಹಳಗನ್ನಡದಲ್ಲಿ ಹ್ರಸ್ವವಾಗಿ ಬಳಕೆಯಾಗಿದೆ.

ಅದನ್ – ಅದಾನ್

ಇದನ್ – ಇದಾನ್

ಕೋಟೆಯನ್– ಕೋಟೆಯಾನ್

ಆಳಿದನ್ – ಆಳಿದಾನ್

೧೩. ಷಷ್ಠಿ ವಿಭಕ್ತಿ ಪ್ರತ್ಯಯದ ಸ್ವರ ಹಳಗನ್ನಡದಲ್ಲಿ ಹ್ರಸ್ವವಾಗಿದ್ದರೆ ಇದು ಪೂರ್ವದಲ್ಲಿ ದೀರ್ಘವಾಗಿರುವುದನ್ನು ಕಾಣಬಹುದು.

ನರಕದ – ನರಕದಾ

ಏಟಿನೆಯ – ಏಟಿನೆಯಾ

ಮಂಗಳೀಸನ– ಮಂಗಳೀಸನಾ

ನವಿಲೂರ – ನವಲೂರಾ

೧೪. ನಿಷೇದಾರ್ಥಕ ಕ್ರಿಯಾಪದಗಳ ಸ್ವರ ಪೂರ್ವದ ಹಳಗನ್ನಡದಲ್ಲಿ ದೀರ್ಘವಾಗಿದ್ದು ನಂತರ ಹಳಗನ್ನಡದಲ್ಲಿ ಹ್ರಸ್ವವಾಗಿ ಬದಲಾವಣೆಯನ್ನು ಹೊಂದಿದೆ.

ತಪ್ಪಾದ – ತಪ್ಪದ

ಇಲ್ಲಾದ – ಇಲ್ಲದ

ನಿಲಲಾರಾದೆ – ನಿಲಲಾರದೆ

೧೫. ಹಳಗನ್ನಡದಲ್ಲಿ ಗುಣವಾಚಕಗಳನ್ನು ಹ್ರಸ್ವಗೊಳಿಸಿ ಬಳಸಿದ್ದರೆ ಪೂರ್ವದಲ್ಲಿ ದೀರ್ಘಗೊಳಿಸಿ ಬಳಸಲಾಗಿದೆ.

ಏಟಿನೆಯ – ಏಟಿನೆಯಾ

ಮೂಜಿನೆಯಾ– ಮೂಜಿನೆಯಾ

ಸಾಸಿಗರ – ಸಾಸಿಗರ

ಗಣದ – ಗಣದಾ

೧೬. ಹಳಗನ್ನಡದಲ್ಲಿ ಅನ್, ಅರ್, ಅಳ್ ಎಂಬ ಅಖ್ಯಾತ ಪ್ರತ್ಯಯಗಳು ಪೂರ್ವದ ಹಳಗನ್ನಡದಲ್ಲಿ ಓನ್, ಓಳ್, ಓರ್ ಎಂದಾಗುತ್ತದೆ.

ಇವನ್ – ಇವೋನ್

ಎಂಬಳ್ – ಎಂಬೋಳ್

ಕಂಡಳ್ – ಕಂಡೋಳ್

ಬರ್ಪರ್ – ಬರ್ಪೋರ್

೧೭. ಹಳಗನ್ನಡದಲ್ಲಿ ಸಪ್ತಮೀ ವಿಭಕ್ತಿ ಪ್ರತ್ಯಯ ಒಳ್ ಎಂದಾಗಿದ್ದರೆ ಅದು ಪೂರ್ವದ ಹಳಗನ್ನಡದಲ್ಲಿ ಉಳ್ ಎಂದಾಗಿದೆ.

ಬೆಟ್ಟದೊಳ್ – ಪೆಟ್ಟದುಳ್

ಆಹವದೊಳ್– ಆಹವದುಳ್

ಧರಣಿಯೊಳ್– ಧರಣಿಯುಳ್

ನಾಡೊಳ್ – ನಾಡುಳ್

೧೮. ಪೂರ್ವದ ಹಳಗನ್ನಡದಲ್ಲಿನ ವ ಕಾರ ಹಳಗನ್ನಡದಲ್ಲಿ ಬ ಕಾರವಾಗುತ್ತದೆ.

ವೆಟ್ಟ – ಬೆಟ್ಟ

ವಿತ್ತು – ಬಿತ್ತು

ವೆಳೆ – ಬೆಳೆ

ವಂದಾನ್ – ಬಂದನ್

೧೯. ಪೂರ್ವದ ಹಳಗನ್ನಡದಲ್ಲಿ ಕೆಲವು ಕ್ರಿಯಾಧಾತುಗಳ ಆದಿಯ ಎ ಮತ್ತು ಒ ಸ್ವರಗಳು ಹಳಗನ್ನಡದಲ್ಲಿ ಕ್ರಮವಾಗಿ ಇ ಮತ್ತು ಉ ಸ್ವರವಾಗಿ ಮಾರ್ಪಡುತ್ತವೆ.

ಕೆಡು – ಕಿಡು

ಕೆಸು – ಕಿಸು

ತೊಡು – ತುಡು

ಕೊಡು – ಕುಡು

೨೦. ಹಳಗನ್ನಡದಲ್ಲಿ ಉ ಕಾರದ ಮುಂದೆ ರ ಕಾರ ಬರುತ್ತದೆ.

ಪೊೞ್ತು – ಪೊರ್ತು

ಕೞ್ತೆ – ಕರ್ತೆ

ಗೞ್ದೆ – ಗರ್ದೆ

೨೧. ಹಳಗನ್ನಡದಲ್ಲಿ ಸ್ವರಗಳ ನಡುವಿನ ಮ ಕಾರ ವ ಕಾರವಾಗಿ ಮಾರ್ಪಡುತ್ತದೆ.

ನೀಮ್ – ನೀವು

ನಾಮ್ – ನಾವು

೨೨. ನಪುಂಸಕ ಲಿಂಗ ಪ್ರತ್ಯಯ ಹಳಗನ್ನಡದಲ್ಲಿ ಉದು ಎಂದಿದ್ದರೆ ಪೂರ್ವದಲ್ಲಿ ಒದು ಎಂದಾಗಿದೆ.

ಇತ್ತುದು – ಇತ್ತೊದು

ಕೊಟ್ಟುದು– ಕೊಟ್ಟೊದು

೨೩. ಉತ್ತಮ ಪುರುಷ ವಿಧ್ಯರ್ಥಕ ಕ್ರಿಯೆಯಲ್ಲಿ ಪೂರ್ವದಲ್ಲಿ ಕ ಮತ್ತು ಗ ಪ್ರತ್ಯಯ ಪ್ರಯೋಗವಾದರೆ ಹಳಗನ್ನಡದಲ್ಲಿ ಕೆ ಮತ್ತು ಗೆ ಪ್ರತ್ಯಯ ಪ್ರಯೋಗವಾಗುತ್ತದೆ.

ಕೆಡುಗ – ಕೆಡುಗೆ

ಪುಟ್ಟಲ್ಕ – ಪುಟ್ಟಲ್ಕೆ

ಕೊಳ್ಗ – ಕೊಳ್ಗೆ

೨೪. ಪೂರ್ವದ ಹಳಗನ್ನಡದಲ್ಲಿ ಪಕಾರ ಹಕಾರವಾಗದೆ ಉಳಿದುಕೊಂಡು ಬಂದಿದ್ದು, ಹಳಗನ್ನಡದಲ್ಲಿ ಶಬ್ದಗಳ ನಡುವೆ ಕೆಲವು ವೇಳೆ ಪಕಾರ ಹಕಾರವಾಗಿರುವುದು ಕಂಡುಬರುತ್ತದೆ.

ಅಪ್ಪನ್ – ಅಹನ್

ಇಪ್ಪನ್ – ಇಹನ್

೨೫. ಪೂರ್ವದಲ್ಲಿ ದ್ವಿತ್ವ ವ್ಯಂಜನಗಳು ಇರುವ ಕಡೆ ಹಳಗನ್ನಡದಲ್ಲಿ ವಿರಳ ವ್ಯಂಜನವಿದೆ.

ತಳೆಕ್ಕಾಡು– ತಳೆಕಾಡು

ತಲೆಪ್ಪೊರೆ– ತಲೆಪೊರೆ

ಎರತ್ತನಂ– ಎರತನಂ

೨೬. ಪೂರ್ವದ ಹಳಗನ್ನಡದಲ್ಲಿದ್ದ ದೀರ್ಘ ಸ್ವರ ಅನಂತರ ಇಲ್ಲವೇ ಎರಡು ಸ್ವರಗಳ ನಡುವಿನ ಅನುನಾಸಿಕ ಹಳಗನ್ನಡದಲ್ಲಿ ಲೋಪವಾಗ ತೊಡಗಿತು.

ಊರಿಂಗೆ– ಊರಿಗೆ

ಸುತಂಗೆ – ಸುತನಿಗೆ

ಅವಂಗೆ – ಅವನಿಗೆ

೨೭. ಒಂದು ಪೂರ್ಣ ಕ್ರಿಯಾಪದ ಹಳಗನ್ನಡದಲ್ಲಿ ಒಂದು ವಾಕ್ಯವಾಗಿ ಬಳಕೆಯಾಗುತ್ತದೆ.

(ನೀನ್)ಬಾ

(ಅವನ್)ಅಜಿವನ್

(ಅವಳ್)ಅಜಿವಳ್

(ನೀನ್)ಪೇಟ್

೨೮. ಹಳಗನ್ನಡದಲ್ಲಿ ಒಂದು ಸರ್ವನಾಮ ಮತ್ತು ನಾಮಪದ ಸೇರಿ ಕ್ರಿಯಾಪದವಿಲ್ಲದೆಯೇ ವಾಕ್ಯವಾಗುತ್ತದೆ.

ಉದಾ:- ಇದು ಕೈಲಾಸಂ, ಇದು ಚಕ್ರವ್ಯೂಹಂ

ಇದು ಬನರ್ಮ, ಅವನಂ ಕಲಿ

೨೯. ಅಪೂರ್ಣ ಕ್ರಿಯಾಪದಗಳ ಭೂತ ನ್ಯೂನರೂಪಗಳು(ತಿಂದು, ನೋಡಿ, ಕೊಟ್ಟು) ವರ್ತಮಾನ ನ್ಯೂನರೂಪಗಳು(ನೂಡುತ್ತೆ, ಬರುತ್ತೆ, ತಿನ್ನುತ್ತೆ), ನಿಷೇದ ನ್ಯೂನರೂಪಗಳು(ತಿನ್ನದೆ, ಬಾರದೆ, ನೋಡದೆ) ಹಳಗನ್ನಡದ ವಾಕ್ಯದಲ್ಲಿ ಕ್ರಿಯಾವಿಶೇಷದ ಕೆಲಸವನ್ನು ನಿರ್ವಹಿಸುತ್ತವೆ.

ತಿಂದ – ತಿಂಬ

ನುಡಿದ – ನುಡಿವ

ಮಾಡದ –ಮಾಡಲಾಗದ

೩೦. ಉತ್ತಮ ಪುರುಷ ಬಹುವಚನ ರೂಪದಲ್ಲಿ ಸಮಾವೇಶಕ ಮತ್ತು ಅಸಮಾವೇಶಕ ಎಂಬ ಎರಡು ಬಗೆಯ ರೂಪಗಳು ಹಳಗನ್ನಡದಲ್ಲಿಯೂ ಬಳಕೆಯಲ್ಲಿದೆ.

ಆಂ(ಎಮ್ಮ, ಎಮಗೆ) ಸಮಾವೇಶಕ

ನಾಂ(ನಮ್ಮ, ನಮಗೆ) ಅಸಮಾವೇಶಕ

೩೧. ನಾಮಪದ, ಕ್ರಿಯಾಪದ, ಸರ್ವನಾಮ, ವಿಶೇಷ, ಕ್ರಿಯಾವಿಶೇಷಣಗಳು ಮತ್ತು ಅಖ್ಯಾತ ಪ್ರತ್ಯಯಗಳು ಮುಂತಾದ ಕೆಲವು ಶಬ್ದಗಳು ಹಳಗನ್ನಡದಲ್ಲಿ ವ್ಯಂಜನಾಂತ್ಯವಾಗುತ್ತವೆ. ಅವು ಹೊಸಗನ್ನಡದಲ್ಲಿ ಸ್ವರಾಂತವಾಗುತ್ತವೆ.

ಮುಗಿಲ್ – ಮುಗಿಲು

ಅವಳ್ – ಅವಳು

ಬಾಳ್ – ಬಾಳು

ಅವರ್ – ಅವರು

ನೀನ್ – ನೀನು

೩೨. ಪದಮಧ್ಯ ಎನ್ನದೆ ನಾಮಪದ ಮತ್ತು ಕ್ರಿಯಾಪದಗಳನ್ನೊಳಗೊಂಡ ಹಳಗನ್ನಡದ ಎಲ್ಲಾ ಪಕಾರಯುಕ್ತ ಶಬ್ದಗಳು ನಡುಗನ್ನಡದಲ್ಲಿ ಹಕಾರವಾಗುತ್ತವೆ.

ಪೊಸ–ಹೊಸ, ಪೊರು–ಹೊರು,

ಪತ್ತು–ಹತ್ತು, ಪಂದಿ–ಹಂದಿ,

ಪಾಲು–ಹಾಲು, ಪೊಗು–ಹೋಗು

೩೩. ಹಳಗನ್ನಡದಲ್ಲಿ ಸಬಿಂದುಕ ನಾಮ ಮತ್ತು ಕ್ರಿಯಾಪದಗಳು ನಡುಗನ್ನಡದಲ್ಲಿ ಅಬಿಂದುಕಗಳಾಗಿವೆ.

ತೋಂಟ – ತೋಟ

ದಾಂಟು – ದಾಟು

ಬೆಡಂಗು – ಬೆಡಗು

೩೪. ಹಳಗನ್ನಡದಲ್ಲಿ ವಿಜಾತೀಯ ದ್ವಿತ್ವಾಕ್ಷರ ರೂಪಗಳ ನಡುವೆ ಸ್ವರ ಸೇರಿ ಸ್ವರವ್ಯತ್ಯಯವಾಗುತ್ತದೆ.

ಸಿಲ್ಕು – ಸಿಲುಕು

ಪೂಣ್ಕೆ – ಹೂಣಿಕೆ

ಪೊಗಟ್ತೆ – ಹೊಗಳತೆ

೩೫. ಹಳಗನ್ನಡದಲ್ಲಿ ಅಪೂರ್ಣ ಕ್ರಿಯೆಗೆ ಪಕ್ಷಾರ್ಥದಲ್ಲಿ ಅಡೆ ಎಂಬ ಪ್ರತ್ಯಯವಿದ್ದರೆ ನಡುಗನ್ನಡ ಮತ್ತು ಹೊಸಗನ್ನಡದಲ್ಲಿ ಅದು ಅರೆ ಎಂದು ಪ್ರಯೋಗವಾಗುತ್ತದೆ.

ನುಡಿದೊಡೆ–ನುಡಿದಡೆ–ನುಡಿದರೆ

ಬೇಡಿದೊಡೆ–ಬೇಡಿದಡೆ–ಬೇಡಿದರೆ

೩೬. ರೇಫ ಸಹಿತವಾದ ಕೆಲವು ಹಳಗನ್ನಡ ಶಬ್ದಗಳ ವಕಾರ ನಡುಗನ್ನಡದಲ್ಲಿ ಬಕಾರವಾಗುತ್ತದೆ.

ಓರ್ವನ್–ಒರ್ಬನ್–ಒರ್ಬ

ಪರ್ವ–ಪರ್ಬ

೩೭. ಹಳಗನ್ನಡದ ಅಯ್,ಅವ್‌ಗಳನ್ನು ನಡುಗನ್ನಡದಲ್ಲಿ ಐ ಮತ್ತು ಔ ಎಂದು ಬರೆಯಲಾಗುತ್ತದೆ.

ಮಯ್–ಮೈ

ಕಯ್–ಕೈ

ಅಯ್ದು–ಐದು

ಅಯ್ನೂರು–ಐನೂರು

೩೮. ಈತನ್, ಆತನ್, ಊತನ್, ಈಕೆ, ಆಕೆ, ಊಕೆ ಎಂಬ ಏಕವಚನ ಗೌರವಾರ್ಥಕ ಸರ್ವನಾಮಗಳು ಹಳಗನ್ನಡದಲ್ಲಿ ಬಳಕೆಯಲ್ಲಿವೆ.

ಕನ್ನಡ ಭಾಷೆಯ ಇತಿಹಾಸದಲ್ಲಿ ಹತ್ತನೆಯ ಶತಮಾನ ಪ್ರಮುಖವಾದ ಘಟ್ಟ. ಈ ಕಾಲದಲ್ಲಿ ವಿಪುಲವಾಗಿದ್ದ ಕನ್ನಡ ದೇಶೀಯ ಕೆಲವು ವೈಲಕ್ಷಣಗಳನ್ನು ಕಳೆದುಕೊಂಡು ಏಕರೂಪತೆ ಪಡೆಯಿತು. ಕವಿಪುಂಗವರಿಂದ ಮಾನ್ಯವಾಗಿದ್ದ ಶಿಷ್ಟ ಭಾಷೆ ಸಾಹಿತ್ಯದ ಮಾಧ್ಯಮವಾಗಿದ್ದಿತು. ಪಂಪ, ರನ್ನರು ಈ ಕನ್ನಡವನ್ನೇ ತಿರುಳ್ ಕನ್ನಡ(ತಿಳಿಗನ್ನಡ) ಎಂದು ಕರೆದರು. ಇದು ಮುಂಚೆ ಹಳಗನ್ನಡ ಎಂಬ ಹಣೆಪಟ್ಟಿಯನ್ನು ಹೊತ್ತು ಪ್ರಚುರಕ್ಕೆ ಬಂದಿತು.

## ಹಳಗನ್ನಡದ ಛಂದಃ ಪ್ರಕರಗಳು

ಪೂರ್ವದ ಹಳಗನ್ನಡದ ಛಂದಸ್ಸಿನ ಬಗ್ಗೆ ತಿಳಿಯಲು ಆಧಾರಗಳ ಕೊರತೆ ಇತ್ತು. ಆದರೆ ಹಳಗನ್ನಡದ ಛಂದಸ್ಸಿನ ಕುರಿತಾದ ಅಧ್ಯಯನಕ್ಕೆ ಸಾಕಷ್ಟು ಆಧಾರಗಳು ದೊರೆಯುತ್ತವೆ. ಪಂಪ,ರನ್ನ, ಜನ್ನ, ನಾಗವರ್ಮ ಮುಂತಾದ ಕವಿಶ್ರೇಷ್ಠರಿಂದ ರಚಿತವಾದ ಹಲವಾರು ಮಹತ್ವದ ಕೃತಿಗಳು ಈ ಕಾಲಘಟ್ಟದ ಛಂದಸ್ಸಿನ ಕುರಿತಾದ ಅಧ್ಯಯನಕ್ಕೆ ಸಹಾಯಕವಾಗಿವೆ. ಈ ಕಾಲದಲ್ಲಿ ಚಂಪೂ, ಕಂದ, ಅಷ್ಟಕ, ಶತಕ ಮುಂತಾದ ಪ್ರಕಾರಗಳು ಸಾಹಿತ್ಯದ ಪ್ರಮುಖ ಅಂಗಗಳಾಗಿದ್ದವು.

೧೦ನೇ ಶತಮಾನದಲ್ಲಿ ರಚಿತವಾದ ಎಲ್ಲಾ ಕೃತಿಗಳು ಚಂಪೂ ಛಂದಸ್ಸಿನಲ್ಲಿಯೇ ರಚಿತವಾದವುಗಳಾಗಿವೆ. ಆದರೆ ಈ ಛಂದಃ ಪ್ರಕಾರವು ಮೂಲತಃ ಕನ್ನಡದ್ದೆ ಅಥವಾ ಸಂಸ್ಕೃತ ಮೂಲವೇ ಎಂಬುದು ಇನ್ನೂ ಸ್ಪಷ್ಟವಾಗಿಲ್ಲ. ಈ ವಿಷಯವಾಗಿ ಸಾಕಷ್ಟು ಚರ್ಚೆಗಳು, ಅಧ್ಯಯನಗಳು ನಡೆದಿವೆ. "ಸಿ.ಆರ್.ದೇಶಪಾಂಡೆಯವರು ತಮ್ಮ 'Studies in Champu Literature' ಎಂಬ ಪ್ರೌಢ ಪ್ರಬಂಧದಲ್ಲಿ ವಿಸ್ತಾರವಾಗಿ ಚರ್ಚಿಸಿ ಚಂಪೂ ರೂಪವು ಮೂಲತಃ ಸಂಸ್ಕೃತದ್ದೇ ಆಗಿದ್ದು ಸಂಸ್ಕೃತಕ್ಕೆ ಇದು ಕನ್ನಡದ ಕಾಣಿಕೆ ಎಂಬ ಅಭಿಪ್ರಾಯದಲ್ಲಿ ಹುರುಳಿಲ್ಲ ಎಂದು ವಾದಿಸಿದ್ದಾರೆ."(ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು- ರಂ.ಶ್ರೀ.ಮುಗಳಿ. ಪು. ೨೧)

ಚಂಪೂ ಸಾಹಿತ್ಯ ಪ್ರಕಾರದ ಮೂಲ ಸ್ಪಷ್ಟವಾಗಿಲ್ಲದಿದ್ದರೂ ಹಳಗನ್ನಡದಲ್ಲಿ ಕೃತಿಗಳಲೆಲ್ಲಾ ಇದರ ಬಳಕೆ ಸಾಕಷ್ಟು ಪ್ರಮಾಣದಲ್ಲಿ ನಡೆದಿದೆ. ಇದರ ಲಕ್ಷಣ ಗದ್ಯ ಪದ್ಯ ಮಿಶ್ರಣವಾಗಿದ್ದು ಪದ್ಯಭಾಗವು ಕಂದ ಪದ್ಯಗಳ ಭೂಯಿಷ್ಟವಾಗಿದೆ. ಗದ್ಯಭಾಗವು ಅಂಶಗಣನಿಯತವಾದ ಅಕ್ಷರವೃತ್ತಗಳು, ಕರ್ನಾಟಕ ವಿಷಯ ಜಾತಿಯೆಂದು ಕರೆಯುವ ತ್ರಿಪದಿ, ಅಕ್ಕರಗಳು ಅಲ್ಲಲ್ಲಿ ಅಳಪಟ್ಟಿವೆ. ಇದರ ಜೊತೆಗೆ ರಗಳೆಯೂ ಸೇರುತ್ತದೆ. ಕನ್ನಡದಲ್ಲಿ ಇವೆ ಎನ್ನಲಾದ ವಿಶಿಷ್ಟ ಕಾವ್ಯ ರೂಪಗಳಾದ ಬೆದಂಡೆ, ಚತ್ತಾಣಗಳ ಲಕ್ಷಣಗಳನ್ನು ಇದರಲ್ಲಿ ಕಾಣಬಹುದು. ಈ ಪ್ರಕಾರದ ಸಾಹಿತ್ಯವನ್ನು ಪಂಪನ ವಿಕ್ರಮಾರ್ಜುನ ವಿಜಯಂ, ರನ್ನನ ಗದಾಯುದ್ಧ ಮುಂತಾದ ಕೃತಿಗಳಲ್ಲಿ ಕಾಣಬಹುದು.

ಚಂಪೂವಿನ ಜೊತೆಗೆ ಈ ಕಾಲಘಟ್ಟದಲ್ಲಿ ಕಾಣುವ ಮತ್ತೊಂದು ಛಂದಃ ಪ್ರಕಾರ ಕಂದಗಳು. ಕನ್ನಡದ ದೇಶೀ ಛಂದಸ್ಸಾಗಿರುವ ಕಂದ ಚಂಪೂವಿನಲ್ಲಿ ಇದರ ಬಳಕೆ ಹೆಚ್ಚಾಗಿದೆ. ಇದರಲ್ಲಿ ಬರುವ ಮುಕ್ಕಾಲು ಪಾಲು ಕಂದ ಪದ್ಯವೇ ಆಗಿದೆ. ಇದರ ಲಕ್ಷಣ ಎಂದರೆ ಇದು ನಾಲ್ಕು ಪಾದಗಳುಳ್ಳ ಪದ್ಯ. ಮೊದಲನೆಯ ಹಾಗೂ ಮೂರನೆಯ ಪಾದಗಳಲ್ಲಿ ನಾಲ್ಕು ಮಾತ್ರೆಯ ಮೂರು ಗಣಗಳುಳ್ಳ ಹನ್ನೆರಡು ಮಾತ್ರೆಗಳು. ಎರಡನೆಯ ಹಾಗೂ ನಾಲ್ಕನೆಯ ಪಾದದಲ್ಲಿ ಐದು ಗಣಗಳುಳ್ಳ ಇಪ್ಪತ್ತು ಮಾತ್ರೆಗಳು ಇರುತ್ತವೆ. ವಿಷಮ ಸ್ಥಾನದಲ್ಲಿ ಜಗಣ ಬರಬಾರದು. ಆರನೆಯ ಸ್ಥಾನದಲ್ಲಿ ಜಗಣವಾಗಲಿ ಇಲ್ಲವೇ ನಾಲ್ಕು ಲಘುವುಳ್ಳ ಗಣವಾಗಲಿ ಬರಲೇಬೇಕು. ನಾಲ್ಕು ಗಣವುಳ್ಳ ಗಣವಿರುವಾಗ ಮೊದಲನೆಯ ಲಘುವಿನ ಸ್ಥಾನದಲ್ಲಿ ಯತಿ ಬರಬೇಕು. ಎಂಟನೆಯ ಸ್ಥಾನದಲ್ಲಿ ಅಂತ್ಯಗುರುವುಳ್ಳ ಗಣವೇ ಬರಬೇಕು. ಕನ್ನಡಕ್ಕೆ ವಿಶಷ್ಟವಾದ ದ್ವಿತೀಯಾಕ್ಷರ ಪ್ರಾಸ ಯೋಜನೆ ಇರಬೇಕು. ಇದು ಮಾತ್ರಾ ಛಂದಸ್ಸನಲ್ಲಿ ರಚಿತವಾಗಿರುವಂತದ್ದು.

ಹಳಗನ್ನಡ ಸಾಹಿತ್ಯದಲ್ಲಿ ಕಾಣುವ ಮತ್ತೊಂದು ಪ್ರಕಾರವೆಂದರೆ ಅಷ್ಟಕ–ಶತಕಗಳು. ಈ ಪ್ರಕಾರದಲ್ಲಿ ಹಲವಾರು ಕೃತಿಗಳು ದೊರೆತಿವೆ. ಇವುಗಳಲ್ಲಿ ಗಜಾಷ್ಟಕ, ವೈರಾಗ್ಯ ಶತಕ ಅಥವಾ ಚಂದ್ರ ಚೂಡಾಮಣಿ ಶತಕ ಮುಖ್ಯವಾದವು. ಅಷ್ಟಕಗಳು ಸಣ್ಣ ಪ್ರಮಾಣದ ಭಾವಗೀತೆಗಳಂತಿದ್ದರೆ ಶತಕಗಳಲ್ಲಿ ಕೆಲವಾದರೂ ಪ್ರಗಾಥದಂತೆ ತುಂಬುಗೊರಳಿನ ಉದ್ಗಾರಗಳಾಗಿರುತ್ತವೆ. ಬೇರೆ ಕೆಲವು ಹೆಚ್ಚಾಗಿ ತತ್ವನಿರೂಪಕವಾಗಿರುತ್ತವೆ. ಶತಕಗಳು ವೃತ್ತ ಅಥವಾ ಕಂದಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿವೆ.

ಇದರ ಜೊತೆಗೆ ಖ್ಯಾತ ಕರ್ನಾಟಕಗಳೆಂದೇ ಪ್ರಸಿದ್ದವಾಗಿರುವ ವೃತ್ತಗಳೂ ಪ್ರಮುಖವಾದವು. 'ಛಂದೋಬದ್ದವಾಗಿ ಬರೆಯಲ್ಪಟ್ಟ ಪದ್ಯವೇ ವೃತ್ತ'. ಇದರಲ್ಲಿ ಚಂಪಕಮಾಲಾ ವೃತ್ತ, ಉತ್ಪಲಮಾಲಾವೃತ್ತ, ಶಾರ್ದೂಲವಿಕ್ರೀಡಿತ ವೃತ್ತ, ಮತ್ತೇಭವಿಕ್ರೀಡಿತ ವೃತ್ತ, ಸ್ರಗ್ಧರೆ, ಮಹಾಸ್ರಗ್ಧರೆ ಎಂಬ ಆರು ವೃತ್ತಗಳಿದ್ದು, ಅಕ್ಷರಮಾತ್ರಾ ಛಂದಸ್ಸಾಗಿದೆ. ಚಂಪೂ ಸಾಹಿತ್ಯದಲ್ಲಿ ಇದರ ಬಳಕೆಯಾಗಿದೆ.

130122

ಹೀಗೆ ಹಳಗನ್ನಡ ಸಾಹಿತ್ಯದಲ್ಲಿ ಬಳಕೆಯಾಗಿರುವ ಛಂದಸ್ಸಿನ ಲಕ್ಷಣವನ್ನು ವಿವರಿಸಬಹುದಾಗಿದೆ

# (ಇ). ನಡುಗನ್ನಡ

ಸಂಸ್ಕೃತ ಭೂಯಿಷ್ಟವಾಗಿದ್ದ ಕನ್ನಡ ಸಾಹಿತ್ಯ ಅದರ ಸೆರೆಯಿಂದ ಬಿಡಿಸಿಕೊಂಡು ದೇಶೀ ಶಬ್ದಗಳನ್ನು ಬಳಸಿಕೊಂಡು ಕಾವ್ಯ ಸೃಷ್ಟಿ ಮಾಡಿದ ಮಹತ್ವದ ಕಾಲಘಟ್ಟವೇ ಈ ನಡುಗನ್ನಡ ಸಾಹಿತ್ಯ ಕಾಲಘಟ್ಟ. ಅದರಲ್ಲೂ ವಚನ ಸಾಹಿತ್ಯ ಇಡೀ ಕನ್ನಡ ಸಾಹಿತ್ಯದಲ್ಲೇ ಹೊಸ ಕ್ರಾಂತಿಯನ್ನು ಮಾಡಿದಂತಹ ಸಾಹಿತ್ಯ. ಕೇವಲ ಪಂಡಿತರ, ಶ್ರೀಮಂತರ ಸ್ವತ್ತಾಗಿದ್ದ ಸಾಹಿತ್ಯವು ಶ್ರೀಸಾಮಾನ್ಯರಿಗೂ ನಿಲುಕುವಂತೆ, ಅವರೂ ಸಾಹಿತ್ಯ ರಚನೆ ಮಾಡಲು ಪ್ರೇರಣೆ ನೀಡಿದ ಮತ್ತು ನಾಲ್ಕು ಮೂಲೆಯಲ್ಲಿ ಬಂದಿತಳಾಗಿದ್ದ ಸ್ತ್ರೀ ಕೂಡ ಸಾಹಿತ್ಯ ರಚನೆಗೆ ಅರ್ಹಳೆಂದು ತೋರಿಸಿಕೊಟ್ಟಂತಹ ಕಾಲ. ಅಕ್ಕಮಹಾದೇವಿ, ಸೂಳೆ ಸಂಕವ್ವ ಮುಂತಾದ ಮಹಿಳೆಯರನ್ನು ಇಲ್ಲಿ ಸ್ಮರಿಸಬಹುದು.

ಭಾಷೆಯಲ್ಲಿ ಸಂಸ್ಕೃತಕ್ಕೆ ಬದಲಾಗಿ ಸ್ಥಳೀಯ ಭಾಷೆಯಾಗಿದ್ದ ಕನ್ನಡವನ್ನೇ ಸಾಹಿತ್ಯದ ಮಾಧ್ಯಮವಾಗಿ ಬಳಸಿಕೊಂಡು ಶ್ರೀಸಾಮಾನ್ಯರಿಗೂ ಸಾಹಿತ್ಯ ತಲುಪುವಂತೆ ಮಾಡಿದ ಕಾಲ. ಸಂಸ್ಕೃತ ಛಂದಸ್ಸನ್ನು ತ್ಯಜಿಸಿ ಹೊಸ ಸಾಹಿತ್ಯ ಪ್ರಕಾರವನ್ನು ಸೃಷ್ಟಿಸಿಕೊಂಡಂತಹ ಕಾಲ. ಬಸವಣ್ಣ, ಅಲ್ಲಮ ಪ್ರಭು, ಕೇಶಿರಾಜ, ಹರಿಹರ, ರಾಘವಂಕ, ಕುಮಾರವ್ಯಾಸ, ದಾಸ ಸಾಹಿತ್ಯ ಶ್ರೇಷ್ಟರಾದ ಕನಕದಾಸರು, ಪುರಂದರದಾಸರು ಹೀಗೆ ಹಲವು ಶ್ರೇಷ್ಟ ಕವಿಗಳನ್ನು ಮತ್ತು ಮಹತ್ವದ ಕಾವ್ಯವನ್ನು ಹಾಗೂ ಕಾವ್ಯ ಪ್ರಕಾರವನ್ನು ಕಾಣಬಹುದು. ಇಂತಹ ಕಾಲದ ಭಾಷೆಯಲ್ಲಿ ಅನೇಕ ಮಾರ್ಪಾಟುಗಳುಂಟಾದವು. ಈ ದೃಷ್ಟಿಯಿಂದ ಅವುಗಳ ಕುರಿತಾದ ಅಧ್ಯಯನ ಬಹಳ ಮಹತ್ವ ಪೂರ್ಣವಾದುದು.

**ನಡುಗನ್ನಡ ಸಾಹಿತ್ಯದ ಪ್ರಮುಖ ಲಕ್ಷಣಗಳು:**

೧. ದೀರ್ಘ ಸಮಾಸದ ಪದಗಳು ನಡುಗನ್ನಡದಲ್ಲಿ ಕಡಿಮೆಯಾಗತೊಡಗಿತು.

ಕ್ರಮದಪ್ಪು>ಕ್ರಮತಪ್ಪು

ಕೌತುಕಂದಾಳ್>ಕೌತುಕತಾಳು

ಆದರೆ ಕೆಲವು ಸಮಾಸ ಪದಗಳು ಹಾಗೆಯೇ ಹೊಸಗನ್ನಡದಲ್ಲಿಯೂ ಉಳಿದುಕೊಂಡು ಬಂದಿರುವುದನ್ನು ಕಾಣಬಹುದು.

ಅಂಗಾಲು, ಕೊನೆಗಾಣು, ಗರಿಗೆದರು

೨. ಸಂಸ್ಕೃತ ಶಬ್ದಗಳಿಗೆ ಬದಲು ಅಪಭ್ರಂಶ ಪದಗಳು ನಡುಗನ್ನಡದಲ್ಲಿ ಹೆಚ್ಚು ಬಳಕೆಯಾಗತೊಡಗಿದವು

ಸ್ಮಶಾನ – ಮಸಣ

ಭಕ್ತಿ – ಬಕುತಿ

ಪಲಗೆ – ಹಲಗೆ

ಪಾರ್ವ – ಹಾರುವ

೩. ಅನುನಾಸಿಕ ಮತ್ತು ಯ, ರ, ಲ, ಳ ಧ್ವನಿಗಳಿಂದ ಅಂತ್ಯವಾಗುತ್ತಿದ್ದ ಶಬ್ದಗಳು ಅಥವಾ ನಡುಗನ್ನಡದಲ್ಲಿ ಸ್ವರಾಂತ್ಯವಾದವು.

ಕಣ್ – ಕಣ್ಣು

ಆಳ್ – ಆಳು

ತಿನ್ – ತಿನ್ನು

ಕಾಯ್ – ಕಾಯಿ

ಕಾಲ್ – ಕಾಲು

೪. ಸಂಯುಕ್ತಾಕ್ಷರಗಳು ಹೆಚ್ಚಾಗಿ ನಡುಗನ್ನಡದಲ್ಲಿ ವಿರಳಾಕ್ಷರಗಳಾಗತೊಡಗಿದವು.

ಆರ್ಗ್ಗೆ – ಯಾರಿಗೆ

ಊರ್ಗ್ಗೆ – ಊರಿಗೆ

೫. –ಅಂ, –ಅನು ಎಂಬ ಪ್ರತ್ಯಯಗಳು ನಡುಗನ್ನಡದ ನಾಮಪದಗಳಲ್ಲಿ ಲೋಪವಾಗುತ್ತವೆ.

ರಾಮಂ– ರಾಮ

ತಂದನು–ತಂದ

ಬಂದನ್–ಬಂದನು–ಬಂದ

೬. ನಡುಗನ್ನಡದಲ್ಲಿ ಸರ್ವನಾಮಗಳಲ್ಲಿ ಮಕಾರ ವಕಾರವಾಗತೊಡಗಿತು.

ನಾಮ್ –ನಾವು

ನೀಮ್ –ನೀವು

ತಾಮ್ –ತಾವು

೭. ನಡುಗನ್ನಡದಲ್ಲಿ ವಿಜಾತೀಯ ಸಂಯುಕ್ತಾಕ್ಷರಗಳು ಸಜಾತೀಯ ಅಕ್ಷರಗಳಾಗತೊಡಗಿದವು.

ಕರ್ತೆ – ಕತ್ತೆ

ಪೊರ್ತು–ಪೊತ್ತು–ಹತ್ತು

ಬಿರ್ದು – ಬಿದ್ದು

ಗರ್ದೆ – ಗದ್ದೆ

೮. ನಡುಗನ್ನಡದಲ್ಲಿ ವಿರಳಾಕ್ಷರಗಳು ಶಬ್ದಗಳಲ್ಲಿ ಒತ್ತಕ್ಷರಗಳಾದವು

ಕಲ್ – ಕಲು – ಕಲ್ಲು

ಪಲ್ – ಪಲು– ಪಲ್ಲು – ಹಲ್ಲು

ಮಣ್– ಮಣು– ಮಣ್ಣು

೯. ಹಿಂದಿನಿಂದಲೂ ಬಳಕೆಯಲ್ಲಿದ್ದ ಎಷ್ಟೋ ಕನ್ನಡ ಶಬ್ದಗಳು ನಡುಗನ್ನಡದಲ್ಲಿ ಬಳಕೆಯಿಂದ ದೂರ ಸರಿದು ಇಲ್ಲವೆ ಬಿದ್ದು ಹೋಗಲಾರಂಭಿಸಿ ಅವುಗಳ ಸ್ಥಾನದಲ್ಲಿ ಬೇರೆ ಬೇರೆ ಶಬ್ದಗಳು ಬಂದು ಸೇರತೊಡಗಿದವು.

೧೦. ನಡುಗನ್ನಡದಲ್ಲಿ ಅರಬ್ಬೀ. ಪಾರಸಿ, ಹಿಂದೂಸ್ಥಾನಿ, ಮರಾಠಿ ಮಂತಾದ ಶಬ್ದಗಳು ಕನ್ನಡಕ್ಕೆ ಬಂದು ಸೇರತೊಡಗಿದವು. ಇವುಗಳಿಗೆ ನಡುಗನ್ನಡದಲ್ಲಿ ಸ್ಪಷ್ಟವಾದ ದಾಖಲೆಗಳು ದೊರೆಯುತ್ತವೆ.

೧೧. ನಡುಗನ್ನಡದಲ್ಲಿ ಪಕಾರದ ಸ್ಥಾನದಲ್ಲಿ ಹಕಾರ ಬಳಕೆಯಾಗತೊಡಗಿದವು.

ಪುಲಿ – ಹುಲಿ

ಪಂದಿ– ಹಂದಿ

ಪಲಗೆ– ಹಲಗೆ

೧೨. ನಡುಗನ್ನಡದಲ್ಲಿ ಲ ಕಾರದ ಸ್ಥಾನದಲ್ಲಿ ಳ ಕಾರ ಬಳಕೆಯಾಗಿದೆ.

ಬೆರಲ್ – ಬೆರಳ್ – ಬೆರಳು

ಕೊರಲ್– ಕೊರಳ್– ಕೊರಳು

ಮರಲ್ – ಮರಳ್ – ಮರಳು

೧೩. ನಡುಗನ್ನಡದಲ್ಲಿ ೞ ಕಾರದ ಸ್ಥಾನದಲ್ಲಿ ಳ ಕಾರ, ಱ ಕಾರದ ಸ್ಥಾನದಲ್ಲಿ ರ ಕಾರ ಬಳಕೆಯಾಯಿತು.

ಬಾೞ್ – ಬಾಳು

ಕೇೞ್ – ಕೇಳ

ಇಱಿ – ಇರಿ

ಉಱಿ – ಉರಿ

೧೪. ನಡುಗನ್ನಡದಲ್ಲಿ ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳಿಂದ ಶಬ್ದಗಳು ಅಷ್ಟಾಗಿ ಸ್ವೀಕಾರವಾಗಲ್ಲಿಲ್ಲ.

೧೫. ಹಳಗನ್ನಡದಲ್ಲಿದ್ದ ಉತ್ತಮ ಪುರುಷ ಬಹುವಚನ ರೂಪದಲ್ಲಿ ಇದ್ದ ಸಮಾವೇಶಕ ಮತ್ತು ಅಸಮಾವೇಶಕ ವ್ಯತ್ಯಾಸ ನಡುಗನ್ನಡದಲ್ಲಿ ಪೂರ್ಣವಾಗಿ ಮಾಯವಾಯಿತು.

ಆಂ–ನಾಮ್–ನಾವು

ನಾಂ–ನಾಮ್–ನಾವು

೧೬. ಸಂಸ್ಕೃತ ಮತ್ತು ಕನ್ನಡ ಪದಗಳನ್ನು ಸೇರಿಸಿ ಮಾಡುವ ಅರಿಸಮಾಸ ಹಳಗನ್ನಡದಲ್ಲಿ ಅಮಾನ್ಯವು, ದೋಷಪೂರ್ಣವೂ ಎಂದು ಭಾವಿಸಲಾಗುತಿತ್ತು. ನಡುಗನ್ನಡದಲ್ಲಿ ಇಂತಹ ರೂಪಗಳ ಪ್ರಯೋಗ ಸ್ವೇಚ್ಛೆಯಾಗಿ ನಡೆಯತೊಡಗಿತು.

೧೭. ಸಂಸ್ಕೃತ ಶಬ್ದಗಳಿಗೆ ತನ ಎಂಬ ಕನ್ನಡ ಪ್ರತ್ಯಯವನ್ನು ಬಳಸುವುದು ನಡುಗನ್ನಡದಲ್ಲಿ ಹೆಚ್ಚಾಗಿ ಕಂಡುಬರುತ್ತದೆ.

ಸಿರಿ – ಸಿರಿತನ

ದುಷ್ಟ– ದುಷ್ಟತನ

ಸ್ತ್ರೀ – ಸ್ತ್ರೀತನ

೧೮. ನಡುಗನ್ನಡದಲ್ಲಿ ೞ(ಳ), ಱ(ರ), ಪ(ಹ) ಧ್ವನಿಗಳಿಗೆ ಇದ್ದ ವ್ಯತ್ಯಾಸ ಕಡಿಮೆಯಾಗತೊಡಗಿ ಅದು ಪೂರ್ಣವಾಗಿ ಮಾಯವಾಯಿತು.

ಆೞ್ –ಆಳು

ಆಱು –ಆರು

ಪಾಱು –ಹಾರು

ಪಾೞು –ಹಾಳು

೧೯. ನಡುಗನ್ನಡದಲ್ಲಿ ಕ್ರಿಯಾಪದದಲ್ಲಿ ಸೇರುವ ವರ್ತಮಾನ ಭವಿಷ್ಯತ್‌ಕಾಲ ವಾಚಕ ಪ್ರತ್ಯಯ ಪ ಒಮ್ಮೊಮ್ಮೆ ಹ ಆಗತೊಡಗಿತು.

ಬಂದಪ್ಪನ್ – ಬಂದಹನ್(ಬಂದಪನ್)

ತಿಂದಪ್ಪನ್ – ತಿಂದಹನ್(ತಿಂದಪನ್)

೨೦. ನಡುಗನ್ನಡದಲ್ಲಿ ಬಹುವಚನ ಪ್ರತ್ಯಯ –ನ್ಗಳ್ ಎಂಬುದರ ಅನುನಾಸಿಕತ್ವ ಮರೆಯಾಗಿ ಹೋಯಿತು.

ಮರಂಗಳ್ – ಮರಗಳು

ಕೊಳಂಗಳ್ – ಕೊಳಗಳು

೨೧. ನಡುಗನ್ನಡದಲ್ಲಿ ಬಳಕೆಯಲ್ಲಿದ್ದ ಕಳು ಎಂಬ ಬಹುವಚನ ಒಂದು ಪರಿಸರದಲ್ಲಿ ಬಿಟ್ಟು ಉಳಿದೆಲ್ಲ ಕಡೆ ಗಳು ಎಂದು ಪ್ರಯೋಗವಾಗಿದೆ.

ಮರಂಕಳ್ – ಮರಂಗಳ್ – ಮರಗಳು

ಅವಂಕಳ್ – ಅವಂಗಳ್ – ಅವರುಗಳು

೨೨. ಹಳಗನ್ನಡದಲ್ಲಿ ವ್ಯಂಜನಾಂತವಾಗಿದ್ದ ಶಬ್ದಗಳು ನಡುಗನ್ನಡದಲ್ಲಿ ಸ್ವರಾಂತವಾದವು.

ಮರಲ್ – ಮರಳು

ಕೊರಲ್ – ಕೊರಳು

ಕಲ್ – ಕಲು

೨೩. ನಡುಗನ್ನಡದಲ್ಲಿ ಉಚ್ಚಾರದಲ್ಲಿ ರಳಕುಳಕ್ಷಳಗಳಲ್ಲಿ ಹಾಗೂ ಶಕಟರೇಫ ಹಾಗೂ ರೇಫಗಳಲ್ಲಿ ವ್ಯತ್ಯಾಸ ಕಡಿಮೆಯಾಗಿದ್ದರೂ ಇದರ ಬಳಕೆ ಬರವಣಿಗೆಯಲ್ಲಿ ಉಳಿದುಕೊಂಡು ಬಂದಿರುವುದನ್ನು ಕಾಣಬಹುದಾಗಿದೆ.

೨೪. ನಡುಗನ್ನಡಕ್ಕಿಂತ ಮುಂಚೆಯೇ ಶಬ್ದಗಳ ಆದಿಯ ಪ ಕಾರ ಹ ಕಾರವಾಗುವ ಬದಲಾವಣೆ ಆರಂಭವಾಯಿತಾದರೂ ಇದು ನಡುಗನ್ನಡದಲ್ಲಿ ಶಬ್ದದ ನಡುವೆಯೂ ಕಾಣಿಸಿಕೊಂಡಿತು.

ಗೋಪುರ – ಗೋಹುರ

೨೫. ಕಾಕಲ್ಯ ಸಂಘರ್ಷಿ ಧ್ವನಿ ಹ್ ನಡುಗನ್ನಡದಲ್ಲಿ ಸ್ಥಾಯಿ ಪಡೆಯಿತಾದರೂ ಹೊಸಗನ್ನಡದಲ್ಲಿ ಹ್ ಕೆಲವು ವೇಳೆ ಲೋಪವಾಗತೊಡಗಿತು.

ಪಾಲು – ಆಲು

ಹಲ್ಲು – ಅಲ್ಲು

೨೬. ಅನುನಾಸಿಕ ಧ್ವನಿ ಇರುವ ಶಬ್ದಗಳಲ್ಲಿ ಪಕಾರ ಅಬಾಧಿತವಾದಂತೆ ನಡುಗನ್ನಡದಲ್ಲಿ ಕಂಡುಬರುತ್ತದೆ.

ಕೆಂಪು, ತಂಪು, ಸೊಂಪು

ಆದರೆ ನೋಂಪಿ ಎನ್ನುವ ಶಬ್ದ ನೋಹಿ ರೂಪದಲ್ಲಿಯೇ ಇದೆ

೨೭. ನಡುಗನ್ನಡದಲ್ಲಿ ಪಕಾರ ಸಜಾತೀಯ ವ್ಯಂಜನಗುಚ್ಚದಲ್ಲಿ ನಿಂತಾಗ ಕಾಕಲ್ಯ ಸಂಘರ್ಷಿ ಧ್ವನಿ ಹ್ ಆಗುವುದಿಲ್ಲ.

ಉಪ್ಪು, ತುಪ್ಪ, ಕಪ್ಪು, ಒಪ್ಪು

೨೮. ನಾಮಪದಗಳ ಕೊನೆಯ ಸ್ವರ ನಡುಗನ್ನಡದ ಉತ್ತರ ಭೇದಗಳಲ್ಲಿ ಎ>ಇ ಆಯಿತು.

ತಲೆ – ತಲಿ, ಮನೆ – ಮನಿ, ಆನೆ – ಆನಿ

ಹಾಗೆಯೇ ಶಬ್ದಾಂತ್ಯದ ಉ ಕಾರ ಅ ಕಾರವಾಗತೊಡಗಿತು.

ಆಳು – ಆಳ, ಎತ್ತು – ಎತ್ತ, ಕಾಳು – ಕಾಳ

೨೯. ನಡುಗನ್ನಡದಲ್ಲಿ ವ್ಯಂಜನಗುಚ್ಚದಲ್ಲಿರುವ ಬ್,ಚ್ ಧ್ವನಿಗಳು ದೀರ್ಘಸ್ವರಗಳಿಗೆ ಪರವಾದಾಗ ಲೋಪವಾಗುತ್ತವೆ. ಶಕಟರೇಫೆ ಸಾಮಾನ್ಯ ರೇಫೆಯಲ್ಲಿ ಐಕ್ಯವಾಗುತ್ತದೆ.

೩೦. ನಡುಗನ್ನಡದ ಕೆಲವು ವಿಶಿಷ್ಟ ಶಬ್ದಗಳು ಈ ಕೆಳಗಿನಂತಿವೆ.

ಒಡಲ್ – ಒಡಲು, ಕೊಡಲಿ – ಕೊಡ್ಲಿ,

ಕಡಲ್ – ಕಡಲು, ಮರಳು– ಮಳ್ಳು,

ಕೊರಳು – ಕೊಳ್ಳು

ಸುಮಾರು ೧೩ನೇ ಶತಮಾನದಿಂದ ೧೬ನೇ ಶತಮಾನದವರೆಗಿನ ಕಾಲವನ್ನು ಸಾಮಾನ್ಯವಾಗಿ ನಡುಗನ್ನಡ ಕಾಲವೆಂದು ಗುರುತಿಸಬಹುದಾದರೂ ಆ ಕಾಲದ ನಡುಗನ್ನಡದಲ್ಲಿ ಪ್ರಾದೇಶಿಕವಾಗಿ ಕೆಲವು ಪ್ರಭೇದಗಳು ಇದ್ದವು. ಹಳಗನ್ನಡದಲ್ಲಿ ಉತ್ತರಭೇದ, ದಕ್ಷಿಣಭೇದಗಳಿದ್ದಂತೆ, ಮೂಡಣ, ತೆಂಕಣ, ಪಡುವಣ, ಬಡಗಣ ಭೇದಗಳು ವಿಕಾಸಗೊಂಡಿದ್ದವು. ಕರಾವಳಿ ಕನ್ನಡವನ್ನು ಪಡುವಣ ಭೇದವೆಂದು ಗುರುತಿಸಿದ್ದಾರೆ. ತೆಂಕಣ ಪ್ರಭೇದ ಕನ್ನಡದ ಶಿಷ್ಟ ಭಾಷೆಯಾಗಿದ್ದಿತು. ನಡುಗನ್ನಡಕ್ಕೆ ಮೈಸೂರು ಅರಸರ

ಆಶ್ರಯ ದೊರೆತ ಮೇಲೆ ಬಡಗಣ ಕನ್ನಡ ಪ್ರಭೇದ ನಡುಗನ್ನಡದಲ್ಲಿ ಬರವಣಿಗೆಯಲ್ಲಿ ಹೆಚ್ಚಿನ ಮನ್ನಣೆ ಪಡೆಯಿತು.

**ನಡುಗನ್ನಡ ಛಂದಸ್ಸಿನ ಪ್ರಕಾರಗಳು:**

ಸಂಸ್ಕೃತ ಭೂಯಿಷ್ಠವಾಗಿದ್ದ ಹಳಗನ್ನಡ ಸಾಹಿತ್ಯಕ್ಕೆ ವಿರುದ್ಧವಾಗಿ ಸಂಪೂರ್ಣ ದೇಶಿ ಭಾಷೆಯಲ್ಲಿ ಮತ್ತು ದೇಶಿ ಛಂದಸ್ಸಿನಲ್ಲಿ ಸಾಹಿತ್ಯ ರಚನೆಯಾದಂತಹ ಕಾಲವೇ ನಡುಗನ್ನಡ ಸಾಹಿತ್ಯದ ಕಾಲ. ಕೇವಲ ಮೇಲ್ವರ್ಗಕ್ಕೆ ಮಾತ್ರ ಸೀಮಿತವಾಗಿದ್ದ ಸಾಹಿತ್ಯ ಶ್ರೀಸಾಮಾನ್ಯರಿಗೆ ನಿಲುಕುವಂತಾಗಿದ್ದು ಮತ್ತು ಸಂಪೂರ್ಣವಾಗಿ ಕನ್ನಡ ಭಾಷೆಯಲ್ಲಿಯೇ ಮತ್ತು ಶ್ರೀ ಸಾಮಾನ್ಯರು ಮತ್ತು ಮಹಿಳೆಯರು ಮುಕ್ತವಾಗಿ ಕಾವ್ಯ ರಚಿಸಿದಂತಹ ಕಾಲ ನಡುಗನ್ನಡ ಸಾಹಿತ್ಯ ಕಾಲ. ಈ ಕಾಲದಲ್ಲಿ ಹಲವಾರು ಛಂದಸ್ಸಿನ ಪ್ರಕಾರಗಳನ್ನು ಕಾಣಬಹುದಾಗಿದೆ. ಉದಾ:- ವಚನ, ಷಟ್ಪದಿ, ರಗಳೆ, ತ್ರಿಪದಿ, ಸಾಂಗತ್ಯ ಇನ್ನು ಮುಂತಾದವು

ಇದರಲ್ಲಿ ಪ್ರಮುಖವಾದದ್ದು ವಚನ. ವಚನಗಳ ಸ್ವರೂಪವನ್ನು ಕುರಿತು ಹೇಳುವುದಾದರೆ "ನಡುಗನ್ನಡ ಶೈಲಿಯ ಅನುಭಾವ ಗದ್ಯದಲ್ಲಿ ಉಸುರಿದ ಆಧ್ಯಾತ್ಮಿಕ ಭಾವಗೀತೆಗಳು"ಎನ್ನಬಹುದು. "ವಚನದಲ್ಲಿರುವುದು ಕೇವಲ ಗದ್ಯವೂ ಅಲ್ಲ, ಕೇವಲ ಪದ್ಯವೂ ಅಲ್ಲ, ಗದ್ಯಪದ್ಯಗಳ ಮಿಶ್ರಣವೂ ಅಲ್ಲ, ಬರೀ ಕಾವ್ಯಮಯವಾದ ಗದ್ಯವೂ ಅಲ್ಲ." ವಚನಗಳಲ್ಲಿ ನೇರವಾದ ತತ್ವನಿರೂಪಣೆ, ನಿತ್ಯೋಪದೇಶ, ಆಚಾರಧರ್ಮದ ವಿವರಣೆಗಳಿಗೆ ಇಂಬುದೊರೆಯುತ್ತದೆ. (ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು-ರಂ.ಶ್ರೀ.ಮುಗಳಿ.ಪು-೧೩೦). ಇಂತಹ ಒಂದು ಸಾಹಿತ್ಯ ಪ್ರಕಾರಕ್ಕೆ ಕಾರಣರಾದವರು ಬಸವಣ್ಣನವರು.

ರಗಳೆಯು ಮೂಲತಃ ಮಾತ್ರಾ ಛಂದಸ್ಸಾಗಿದ್ದು ಇದು ನಡುಗನ್ನಡದಲ್ಲಿ ಹೆಚ್ಚಿನ ಬಳಕೆಯಾಗಿರುವುದು ಕಂಡುಬರುತ್ತದೆ. ಆದರೆ ಇದು ಮಾತ್ರಾ ಛಂದಸ್ಸಾಗಿರುವುದರಿಂದ ಇದು ಮೂಲತಃ ಕನ್ನಡದ್ದೇ ಇಲ್ಲವೆ ಸಂಸ್ಕೃತದ್ದೇ ಎಂಬುದರಲ್ಲಿ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಆದರೂ ಈ ಛಂದಸ್ಸಿನಲ್ಲಿ ಸಾಕಷ್ಟು ಮಹತ್ವದ ಕೃತಿಗಳು ರಚನೆಯಾಗಿವೆ. ಇದರ ಲಕ್ಷಣ ಇಂತಿದೆ- ಚರಣದಲ್ಲಿ ಮಾತ್ರೆಗಳಿಗೆ ಗಣನಿಯಮ ವಿನ್ಯಾಸವಿರುತ್ತದೆ. ಪ್ರತಿಚರಣದಲ್ಲಿ ಮಾತ್ರೆ ಸಮಾನವಾಗಿರುತ್ತದೆ. ಇದು ತಾಳದ ಗಣನೆಗೆ ಒಳಪಟ್ಟಿದೆ. ಅಂತ್ಯ ಪ್ರಾಸ ನಿಯತವಾಗಿದೆ.

ಇದರಲ್ಲಿ ಪ್ರಮುಖವಾಗಿ ಮಂದಾನಿಲ ರಗಳೆ, ಲಲಿತ ರಗಳೆ, ಉತ್ಸಾಹ ರಗಳೆ ಎಂಬ ಮೂರು ವಿಧವನ್ನು ಕಾಣಬಹುದು.

ಕನ್ನಡ ಭಾಷೆಯಲ್ಲಿ ದೊರೆತ ಮೊದಲ ಛಂದಃ ಪ್ರಕಾರವೇ ತ್ರಿಪದಿ. ೭ನೇ ಶತಮಾನದ ಬಾದಾಮಿ ಶಾಸನದಲ್ಲಿ ಈ ಛಂದ ಪ್ರಕಾರ ಮೊದಲು ದೊರೆಯಿತು. ಆದರೆ ಹಳಗನ್ನಡ ಕಾಲಕ್ಕೆ ಈ ಪ್ರಕಾರ ಅಷ್ಟೊಂದು ಬಳಕೆಯಾಗಿಲ್ಲ. ನಡುಗನ್ನಡದಲ್ಲಿ ಈ ಪ್ರಕಾರವನ್ನು ಕಾಣಬಹುದು. ಇದರ ಲಕ್ಷಣ ಇಂತಿದೆ– ಮೂರು ಪಾದಗಳ ಒಟ್ಟು ೧೧ ಗಣಗಳು. ೬ನೇ ಮತ್ತು ೧೦ನೇ ಗಣಗಳು ಬ್ರಹ್ಮ ಗಣಗಳು. ಉಳಿದವು ವಿಷ್ಣು ಗಣಗಳು. ೭ ಮತ್ತು ೧೧ನೇ ಗಣಗಳು ಎರಡು ಲಘುವಿನಿಂದ ಆರಂಭವಾಗುತ್ತವೆ. ಇದರಲ್ಲಿ ಚಿತ್ರ ಮತ್ತು ವಿಚಿತ್ರ ಎಂಬ ಎರಡು ಪ್ರಭೇದಗಳನ್ನು ನಾಗವರ್ಮ ಹೇಳಿದ್ದಾನೆ.

ಈ ಕಾಲದ ಮತ್ತೊಂದು ಪ್ರಮುಖವಾದ ಛಂದಸ್ಸಿನ ಪ್ರಕಾರವೆಂದರೆ ಷಟ್ಪದಿ. ಕನ್ನಡದ ಷಟ್ಪದಿಯ ಬಗ್ಗೆ ಸಾಕಷ್ಟು ಚರ್ಚೆ ನಡೆದಿದೆ. ಮೂಲದಲ್ಲಿ ಷಟ್ಪದಿ ಒಂದೇ ಆಗಿದ್ದು ಅಂಶಗಣಾನ್ವಿತವಾಗಿತ್ತೆಂಬುದು ಸ್ಪಷ್ಟವಾಗಿದ್ದು ಕಾಲಾನಂತರದಲ್ಲಿ ಮಾತ್ರಾಗಣವಾಯಿತೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಮೂಲ ಷಟ್ದಿಯ ಗಣ ಯೋಜನೆ ಈ ರೀತಿ ಇದೆ. ೧ವಿ. ವಿ. ೨. ವಿ. ವಿ. ೩.ವಿ. ವಿ. ರು. ನಾಗವರ್ಮನು ಮಾತ್ರಾ ಷಟ್ಪದಿಯ ಕುರಿತು ತನ್ನ ಛಂದೊಂಬುದಿಯಲ್ಲಿ ಈ ರೀತಿ ಹೇಳಿದ್ದಾನೆ.ಮೊದಲೆರಡು ಪಾದಗಳಲ್ಲಿ ಸಮಾನ ಸಂಖ್ಯೆಯ ಮಾತ್ರೆಗಳಿರುತ್ತವೆ. ಮೂರನೆಯ ಸಾಲು ಉಳಿದ ಪಾದಗಳ ಒಂದುವರೆಯಷ್ಟು ಇದ್ದು ಮೇಲೊಂದು ಗುರು ಬರುತ್ತದೆ. ಈ ಮೇಲಿನ ಮೂರು ಪಾದಗಳಂತೆ ಉಳಿದ ಪಾದಗಳಿರುತ್ತವೆ. ಈ ಛಂದಸ್ಸುಗಳಲ್ಲದೆ ನಾಗವರ್ಮನು ಮದನಗತಿ, ಅಕ್ಕರ, ಚೌಪದಿ, ಗೀತಿಕೆ, ಏಳೆ, ಉತ್ಸಾಹ ಮುಂತಾದ ೧೦ ಬಗೆಯ ಮಟ್ಟುಗಳನ್ನು ತಿಳಿಸಿದ್ದಾನೆ.

## (ಈ). ಹೊಸಗನ್ನಡ

೧೯ನೆಯ ಶತಮಾನದಿಂದ ಕನ್ನಡ ಭಾಷೆಯಲ್ಲಿ ಹಾಗೂ ಸಾಹಿತ್ಯದಲ್ಲಿ ಹೊಸ ಬದಲಾವಣೆಗಳು ಕಂಡುಬರುತ್ತವೆ. ಬ್ರಿಟೀಷ್‌ರ ಆಗಮನದಿಂದ, ಕ್ರೈಸ್ತ ಮಿಶನರಿಗಳ ಪ್ರಭಾವದಿಂದ ಪಾಶ್ಚಿಮಾತ್ಯ ಚಿಂತನೆಗಳು ಭಾರತೀಯರಲ್ಲಿ ಹೊಸ ಆಲೋಚನೆಗಳನ್ನು ಹುಟ್ಟುಹಾಕಿದವು. ಕನ್ನಡ ಪದಕೋಶಕ್ಕೆ ಪಾಶ್ಚಿಮಾತ್ಯ ಶಬ್ದಗಳು ಸೇರಲಾರಂಭಿಸಿದವು. ಅರಬ್ಬೀ, ಪಾರ್ಸಿ, ಉರ್ದು ಮುಂತಾದ ಅನ್ಯದೇಶಿ ಶಬ್ದಗಳು ಸಹಜವಾಗಿ ಹಾಗೂ ನೇರವಾಗಿ ಕನ್ನಡ ಭಾಷೆಗೆ ಸ್ವೀಕಾರವಾದವು. ಆ ಶಬ್ದಗಳಿಗೆ ಅ ಕಾರ ಮತ್ತು ಉ ಕಾರ ಸ್ವರವನ್ನು ಸೇರಿಸಿ ಕನ್ನಡ ಶಬ್ದಗಳಂತೆಯೇ ಅವುಗಳನ್ನು ಮಾತಾಡುವ ಭಾಷೆಯಲ್ಲೂ ಹಾಗೂ ಸಾಹಿತ್ಯದಲ್ಲೂ ಬಳಸಲಾರಂಬಿಸಿದರು. ಇದರ ಜೊತೆಗೆ ನೆರೆಹೊರೆಯ ಭಾಷೆಗಳಾದ ಮರಾಠಿ, ತೆಲುಗು, ತಮಿಳು, ಬಂಗಾಳಿ ಭಾಷೆಗಳಿಂದಲೂ ಕನ್ನಡಕ್ಕೆ ಶಬ್ದಗಳು ಸೇರಿದವು.

ಇದರ ಜೊತೆಗೆ ಪಾಶ್ಚಾತ್ಯ ಸಾಹಿತ್ಯದ ವಿಚಾರಧಾರೆಗಳು ಮತ್ತು ಸಾಹಿತ್ಯ ಪ್ರಕಾರಗಳು ಈ ದಿಕ್ಕಿನೆಡೆಗೆ ಹರಿಯಲಾರಂಭಿಸಿದವು ಮತ್ತು ಕನ್ನಡದ ಸಾಹಿತಿಗಳು ಇದರಿಂದ ಪ್ರಭಾವಿತರಾಗಿ ಸಾಹಿತ್ಯವನ್ನು ರಚಿಸಲಾರಂಭಿಸಿದರು. ಪಾಶ್ಚಿಮಾತ್ಯರ ಪ್ರಭಾವಕ್ಕೆ ಒಳಗಾಗಿ ವಿಮರ್ಶೆ ಕೂಡ ಪ್ರಚುರಪಡೆಯಿತು. ಕನ್ನಡ ವರ್ಣಮಾಲೆಯಲ್ಲಿ ಅನ್ಯದೇಶಿ ಶಬ್ದಗಳಿಂದ ಹೊಸ ಧ್ವನಿಗಳ ಸೇರ್ಪಡೆಯಾದವು. ಕೇಶಿರಾಜ ಹೇಳಿದ ೪೭ ಅಕ್ಷರಗಳನ್ನು ಮೀರಿ ಮತ್ತೆ ಸಂಸ್ಕೃತದ ವರ್ಣಮಾಲೆಯನ್ನೇ ಅನುಸರಿಸಲಾರಂಭಿಸಿದರು. ಮುದ್ರಣದ ವ್ಯವಸ್ಥೆ ಬಂದ ಮೇಲಂತೂ ಭಾಷೆಯಲ್ಲಿ ಮತ್ತು ಲಿಪಿಯಲ್ಲಿ ಸಾಕಷ್ಟು ಬದಲಾವಣೆಯು ಕನ್ನಡ ಭಾಷೆಯಲ್ಲಿ ಕಾಣಿಸಿಕೊಂಡವು.

ಹೊಸಗನ್ನಡ ಕನ್ನಡ ಸಾಹಿತ್ಯದಲ್ಲಿಯೇ ಪ್ರಮುಖವಾಗಿ ನಾಲ್ಕು ಘಟ್ಟಗಳನ್ನು ಗುರುತಿಸಲಾಗಿದೆ

೧. ನವೋದಯ ಅಥವಾ ರೊಮ್ಯಾಂಟಿಕ್ ಸಾಹಿತ್ಯ ಕಾಲಘಟ್ಟ

೨. ಪ್ರಗತಿಶೀಲ ಸಾಹಿತ್ಯ ಕಾಲಘಟ್ಟ

೩. ನವ್ಯ ಸಾಹಿತ್ಯ ಕಾಲಘಟ್ಟ

೪. ದಲಿತ ಮತು ಬಂಡಾಯ ಹಾಗೂ ಸ್ತ್ರೀವಾದಿ ಸಾಹಿತ್ಯ ಕಾಲಘಟ್ಟ

ಹೀಗೆ ಹಲವಾರು ಕಾರಣಗಳಿಂದ ಹೊಸಗನ್ನಡ ಸಾಹಿತ್ಯವನ್ನು ಕನ್ನಡ ಸಾಹಿತ್ಯ ಚರಿತ್ರೆಯಲ್ಲೇ ಮತ್ತೊಂದು ಮೈಲಿಗಲ್ಲು ಎನ್ನಬಹುದು. ಈ ಕಾಲಘಟ್ಟದ ಸಾಹಿತ್ಯ ಕುರಿತಾದ ಅಧ್ಯಯನ ಬಹಳ ಮಹತ್ವ ಪೂರ್ಣದ್ದಾಗಿದೆ. ಈ ಕಾಲಘಟ್ಟದ ಕೆಲವು ವೈಶಿಷ್ಟ್ಯಗಳನ್ನು ಈ ಕೆಳಕಂಡಂತೆ ಗುರುತಿಸಬಹುದಾಗಿದೆ.

೧. ಹೊಸಗನ್ನಡದ ಪ್ರಮುಖ ಬೆಳವಣಿಗೆಯೆಂದರೆ ಹಳಗನ್ನಡದ ಪ್ರಮುಖ ದೇಶಿ ಲಕ್ಷಣವಾಗಿದ್ದು, ನಡುಗನ್ನಡದಲ್ಲಿ ಕೇವಲ ಬರವಣಿಗೆಯಲ್ಲಿಯೇ ಉಳಿದುಕೊಂಡು ಬಂದಿದ್ದ ೞ ಮತ್ತು ಱ ಕಾರಗಳು ಪೂರ್ಣವಾಗಿ ಹೊಸಗನ್ನಡದಲ್ಲಿ ಮಾಯವಾದವು.

ಆೞು –ಆಳು

ಆಱು –ಆರು

ಪಾಱು–ಹಾರು

ಪಾೞು–ಹಾಳು

೨. ಅನ್ಯಭಾಷೆಗಳಾದ ಅರಬ್ಬಿ, ಪಾರಸಿ, ಉರ್ದು, ಪೋರ್ಚುಗೀಸ್, ಮತ್ತು ಇಂಗ್ಲಿಷ್ ಭಾಷೆಗಳಿಂದ ಅನೇಕ ಶಬ್ದಗಳು ಹೊಸಗನ್ನಡಕ್ಕೆ ಸ್ವೀಕಾರವಾಗಲಾರಂಭಿಸಿದ್ದರಿಂದ ನಡುಗನ್ನಡದಲ್ಲಿ ಇಲ್ಲದ ಫ಼, ಜ಼, ಖ಼ ಧ್ವನಿಗಳು ಹೊಸಗನ್ನಡದಲ್ಲಿ ಬಳಕೆಯಾಗಲು ಆರಂಭಿಸಿದವು.

ಶಿಫಾರಸ್ಸು, ಫಕೀರ, ಫಾಯಿದೆ,

ಖಜಾನೆ, ಫೈಲ್, ಡಜ಼ನ್, ಖ಼ಾತೆ,

೩. ನಡುಗನ್ನಡ, ಹಳಗನ್ನಡಗಳಲ್ಲಿ ಬಳಕೆಯಲ್ಲಿದ್ದ ಪಕ್ಷಾರ್ಥ ಪ್ರತ್ಯಯ ಅಡೆ ಹೊಸಗನ್ನಡದಲ್ಲಿ 'ಅರೆ' ಎಂದಾಗಿ ಪೂರ್ಣವಾಗಿ ಬದಲಾಯಿತು.

ಬಂದಡೆ – ಬಂದರೆ

ಹೋದಡೆ – ಹೋದರೆ

ಕೊಟ್ಟೊಡೆ – ಕೊಟ್ಟರೆ

೪. ಹೊಸಗನ್ನಡದಲ್ಲಿ ವಿಭಕ್ತಿ ಪ್ರತ್ಯಯ, ಸಮುಚ್ಚಯ, ಕಾಲಸೂಚಕ ಪ್ರತ್ಯಯಗಳಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಪಂಚಮ ವಿಭಕ್ತಿ ಪ್ರತ್ಯಯ ಹೊಸಗನ್ನಡದಲ್ಲಿ ಸಂಪೂರ್ಣವಾಗಿ ಮರೆಯಾಗಿರುವುದನ್ನು ಕಾಣಬಹುದು. ಈ ಪ್ರತ್ಯಯಕ್ಕೆ ಬದಲಾಗಿ ತೃತೀಯ ವಿಭಕ್ತಿಯನ್ನೇ ಬಳಸಲಾಗುತ್ತಿದೆ.

ರಾಮನ ದೆಸೆಯಿಂದ > ರಾಮನಿಂದ

ಮರದ ದೆಸೆಯಿಂದ > ಮರದಿಂದ

೫. ಹೊಸಗನ್ನಡದಲ್ಲಿ ಇಲ್ಲ ಎಂಬ ನಿಷೇದ ರೂಪದ ಬಳಕೆ ಯಥೇಚ್ಛವಾಗಿ ಬಳಕೆಯಾಗಿದೆ.

ನೊಡೆ – ನೋಡೆನು – ನೋಡುವುದಿಲ್ಲ

ಮಾಡೆ – ಮಾಡೆನು – ಮಾಡುವುದಿಲ್ಲ

೬. ಹೊಸಗನ್ನಡದಲ್ಲಿ ಮಿನ್, ಬಾನ್, ಅಜಿಲ್ ಇತ್ಯಾದಿ ಹಲವಾರು ದೇಶ್ಯ ಶಬ್ದಗಳು ಚಲಾವಣೆಯಿಂದ ಮಾಯವಾಗಿ ಅವುಗಳ ಸ್ಥಾನದಲ್ಲಿ ಸಂಸ್ಕೃತ ಶಬ್ದಗಳು ಬಳಕೆಯಾಗ ತೊಡಗಿದವು.

ಆಕಾಶ, ಧರಣಿ, ನಕ್ಷತ್ರ ಇತ್ಯಾದಿ

೭. ಸಂಸ್ಕೃತ ವರ್ಣ ಮಾಲೆಯನ್ನೇ ಹೊಸಗನ್ನಡದಲ್ಲಿ ಬಳಕೆ ಮಾಡಲಾಯಿತು. ಕೇಶಿರಾಜನು ಹೇಳಿದ ಅಚ್ಚಗನ್ನಡದ ವರ್ಣಮಾಲೆ ಮತ್ತು ಐದು ದೇಶೀ ವರ್ಣಗಳಿಗೆ ಬದಲಾಗಿ ಪೂರ್ವದಲ್ಲಿದ್ದ ಸಂಸ್ಕೃತ ವರ್ಣಮಾಲೆಯು ಬಳಕೆಗೆ ಬಂತು.

೮. ವರ್ತಮಾನದ ಪೂರ್ವಕ್ರಿಯಾ ಪದಕ್ಕೆ ಏನೆ, ಏವೆ, ಈ, ಈರಿ, ಆನೆ, ಆಳೆ ಅರೆ, ಅದೆ, ಇದೆ, ಅವೆ, ಇವೆ ಎಂಬ ಅಖ್ಯಾತ ಪ್ರತ್ಯಯಗಳು ಹೊಸಗನ್ನಡದಲ್ಲಿ ಬಳಕೆಯಾಗತೊಡಗಿದವು.

೯. ವರ್ತಮಾನ ಪೂರ್ಣಕ್ರಿಯೆಯು ಕೂಡ ಭವಿಷ್ಯತ್ ಅರ್ಥದಲ್ಲಿಯೂ ಹೊಸಗನ್ನಡದಲ್ಲಿ ಬಳಕೆಯಾಗತೊಡಗಿತು.

೧೦. ಹೊಸಗನ್ನಡದಲ್ಲಿ ವರ್ತಮಾನ, ಭವಿಷ್ಯತ್, ಭೂತಕಾಲಗಳು ಬರಹದ ಭಾಷೆಯಲ್ಲಿ ಬೇರೆ ಬೇರೆಯಾಗಿ ತೋರಿಬಂದರೂ ಆಡುಭಾಷೆಯಲ್ಲಿ ವರ್ತಮಾನದಲ್ಲಿಯೇ ಭವಿಷ್ಯತ್ ಐಕ್ಯವಾಗಿ ಹೋಯಿತು.

೧೧. ಹೊಸಗನ್ನಡದಲ್ಲಿ ಭೂತಕಾಲ ಹಾಗೂ ಭೂತೇತರಕಾಲ ಎಂಬ ಎರಡು ಭೇದಗಳು ಮಾತ್ರ ಸ್ಪಷ್ಟವಾಗಿ ಬಳಕೆಯಲ್ಲಿವೆ.

೧೨. ಹೊಸಗನ್ನಡಕ್ಕೆ ಸಂಸ್ಕೃತ, ಪ್ರಾಕೃತ, ಉರ್ದು, ಮರಾಠಿ, ಪಾರಸಿ, ಇಂಗ್ಲಿಷ್ ಮುಂತಾದ ಭಾಷೆಗಳಿಂದ ಮಹಾಪ್ರಾಣ ಧ್ವನಿಗಳು ಬಂದು ಸೇರತೊಡಗಿದವು.

೧೩. ಹೊಸಗನ್ನಡದಲ್ಲಿ ಊಷ್ಮ ಧ್ವನಿಗಳು ಸ್ಪಷ್ಟವಾಗಿ ಬಳಕೆಯಲ್ಲಿವೆ. ಅವು ಆಡು ಮಾತಿನಲ್ಲಿ ಮಾತ್ರ 'ಸ'ಕಾರದೊಡನೆ ಐಕ್ಯಗೊಂಡಿವೆ.

ಶಂಕರ – ಸಂಕರ

ಮಾದೇಶ – ಮಾದೇಸ

ವರ್ಷ – ವರ್ಸ

೧೪. ಹಳಗನ್ನಡದ ದೀರ್ಘ ಸಮಾಸಗಳು ಹೊಸಗನ್ನಡದಲ್ಲಿ ಹ್ರಸ್ವವಾಗಿ ಸಮಾಸದ ಎರಡು ಪದಗಳು ಬೇರೆ ಬೇರೆಯಾಗಿ ನಿಂತವು.

ಕ್ರಮದಪ್ಪು – ಕ್ರಮ ತಪ್ಪು

ಕೌತುಕಂದಾಳ್– ಕೌತುಕ ತಾಳು

೧೫. ಹೊಸಗನ್ನಡದಲ್ಲಿ ಅಂಗಾಲು, ಅಂಗೈ, ಕೊನೆಗಾಣು, ಗರಿಗೆದರು ಎಂಬ ಸಮಾಸ ಪದಗಳು ಹಾಗೆಯೇ ಉಳಿದುಕೊಂಡವು. ಇವುಗಳಲ್ಲಿ ಬದಲಾವಣೆ ಏನೂ ಆಗಿಲ್ಲ.

೧೬. ಪ್ರಥಮ ಪುರುಷ ಸರ್ವನಾಮದಲ್ಲಿ ಪುಲ್ಲಿಂಗ ಪ್ರತ್ಯಯ ಅನು ಎಂಬುದು ಹೊಸಗನ್ನಡದಲ್ಲಿ ಅ ಆಗಿ ಬದಲಾವಣೆ ಪಡೆಯಿತು.

ಅವನು – ಅವ

ಇವನು – ಇವ

ಬಂದನು– ಬಂದ

ಹೋದನು–ಹೋದ

೧೭. ಹೊಸಗನ್ನಡದಲ್ಲಿ ಅನೇಕ ಪ್ರಾದೇಶಿಕ ಹಾಗೂ ಸಮಾಜಿಕ ಪ್ರಭೇದಗಳು ಕಾಣಿಸಿಕೊಂಡವು.

೧೮. ಹಳಗನ್ನಡದಲ್ಲಿ ನಿಷೇಧ ಕ್ರಿಯೆ ಪೂರ್ಣಕ್ರಿಯಾಪದಕ್ಕೆ ಇಲ್ಲ ಎಂಬುದು ಸೇರಿ ನಿರ್ದೇಶಿತವಾಗುತ್ತಿತು. ಈ ನಿಷೇಧ ಕ್ರಿಯೆಯಲ್ಲಿ ಕಾಲ ಸೂಚಕವಿಲ್ಲ. ಇಲ್ಲ ಎಂಬುದು ಅದರ ಪೂರ್ವದಲ್ಲಿ ಬಂದು ಪೂರ್ಣಕ್ರಿಯಾಪದದ ಮೂಲಕ ನಡೆಯುತ್ತಿತ್ತು. ಕ್ರಿಯಾಧಾತು ಮತ್ತು ಸರ್ವನಾಮ ಪ್ರತ್ಯಯ ಸೇರಿದ ಕಾಲ ಸೂಚನೆ ಇತರ ನಿಷೇಧ ಕ್ರಿಯೆಯಾಗಿ ಇರುತ್ತಿತ್ತು. ಇದು ನಡುಗನ್ನಡ ಮತ್ತು ಹೊಸಗನ್ನಡದಲ್ಲಿ ಬದಲಾಗಿದೆ.

ಬಂದುದು+ಇಲ್ಲ – ಬಂದುದಿಲ್ಲ – ಬಂದಿಲ್ಲ

ಬರುವುದು+ಇಲ್ಲ – ಬರುವುದಿಲ್ಲ– ಬರುವುದಿಲ್ಲ

ಬರಲು+ಇಲ್ಲ – ಬಂದಿಲ್ಲ

ಕೊಡಲು+ಇಲ್ಲ – ಕೊಡ್ಲಿಲ್ಲ

೧೯. ವ್ಯಂಜನಗಳು ಸಮರೂಪ ಧಾರಣೆ ಹೊಂದುವುದು ಹೊಸಗನ್ನಡದಲ್ಲಿ ಸರ್ವೇಸಾಮಾನ್ಯ.

ಅಗ್ನಿ – ಅಗ್ಗಿ

ನಿದ್ರಾ – ನಿದ್ದೆ

ವಿಸ್ತಾರ– ಬಿತ್ತರ

ವೇತ್ರ – ಬೆತ್ತ

೨೦. ಹಳಗನ್ನಡದಲ್ಲಿ ವ್ಯಂಜನಾಂತ್ಯ ಶಬ್ದಗಳು ನಡುಗನ್ನಡ ಮತ್ತು ಹೊಸಗನ್ನಡದಲ್ಲಿ ಸ್ವರಾಂತ್ಯವಾಗುತ್ತವೆ.

ಕಾಲ್ – ಕಾಲು

ಕೇಳ್ – ಕೇಳು

ಕೊಲ್ – ಕೊಲ್ಲು

೨೧. ನಡುಗನ್ನಡದ ಸರಳ ವ್ಯಂಜನಯುಕ್ತ ಪದಗಳು ಹೊಸಗನ್ನಡದಲ್ಲಿ ದ್ವಿತ್ವವಾಗುತ್ತವೆ.

ಕಲು – ಕಲ್ಲು

ಪಲು – ಪಲ್ಲು – ಹಲ್ಲು

ಕಣ್ಣು – ಕಣ್ಣು

೨೨. ಹೊಸಗನ್ನಡದಲ್ಲಿ ಚ್–ಸ್ ಆಗುತ್ತದೆ, ಹಾಗೆಯೇ ಸ್–ಚ್ ಆಗುತ್ತದೆ.

ಚೂರ್ಣ – ಸುಣ್ಣ

ಚಾಪೆ – ಸಾಪೆ

ಸಕ್ಕುಲಿ – ಚಕ್ಕುಲಿ

ಸಕ್ಕರೆ – ಚಕ್ಕರೆ

೨೩. ಹೊಸಗನ್ನಡದಲ್ಲಿ ಕೆಲವು ವೇಳೆ ವಕಾರ ಮಕಾರವಾಗುವುದೂ ಉಂಟು.

ಮಾವ – ಮಾಮ

ಬಾವಿ – ಬಾಮಿ

೨೪. ಸಂಯುಕ್ತ ವ್ಯಂಜನಗಳುಳ್ಳ ಪದಗಳು ಹೊಸಗನ್ನಡದಲ್ಲಿ ಕೆಲವು ವೇಳೆ ವಿರಳವಾದವು.

ಆರ್ಗೆ – ಆರಿಗೆ – ಯಾರಿಗೆ

ಕಾಣ್ಕೆ – ಕಾಣಿಕೆ

ಅವರ್ಗೆ – ಅವರಿಗೆ

೨೫. ಹೊಸಗನ್ನಡದ ಕೆಲವು ಪ್ರಭೇದಗಳಲ್ಲಿ ಪದಗಳ ಸ್ವರ ಲೋಪಗೊಂಡು ಹಲವು ಸಂಯುಕ್ತ ವ್ಯಂಜನಗಳು ಬರಹದಲ್ಲಿ ಇರುವುದಕ್ಕಿಂತ ಬೇರೆಯಾಗಿ ರೂಪುಗೊಂಡವು.

ಹೊರಟು –ಹೊರ್ಟು ಕೊಡಲಿ – ಕೊಡ್ಲಿ

ಅಡಕೆ – ಅಡ್ಕೆ ಬರಲು – ಬರ್ಲು

ಮರಳು – ಮಳ್ಳು ಕೊರಳು– ಕೊಳ್ಳು

೨೬. ಹೊಸಗನ್ನಡದಲ್ಲಿ ಮಹಾಪ್ರಾಣ ವ್ಯಂಜನಗಳು ಬ್ರಾಹ್ಮಣರ ಕನ್ನಡದಲ್ಲಿ ಕಾಣಿಸಿಕೊಳ್ಳುವಂತೆ ಇತರ ಪ್ರಭೇದಗಳಲ್ಲಿ ಕಾಣಿಸಿಕೊಳ್ಳುವುದಿಲ್ಲ. ಇದು ಕೆಲವು ವೇಳೆ ಶಿಕ್ಷಿತ ವರ್ಗದಲ್ಲಿಯೂ ಕಾಣಿಸಿಕೊಳ್ಳಬಹುದು.

ದವಾಖಾನೆ – ದವಾಕಾನೆ

ಕಥೆ – ಕತೆ

ಘಂಟೆ – ಗಂಟೆ

ಖರ್ಚು– ಕರ್ಚು

೨೭. ಹೊಸಗನ್ನಡ ಶಬ್ದಗಳಲ್ಲಿ ವ್>ಬ್, ಮ್>ವ್ ಎಂದು ಬದಲಾಗುವುದು ಉಂಟು.

ವಸತಿ – ಬಸದಿ

ಗ್ರಾಮ – ಗವ

ಬಾಮಿ –ಬಾವಿ

೨೮. ಹೊಸಗನ್ನಡ, ನಡುಗನ್ನಡ ಮತ್ತು ಹಳಗನ್ನಡ ಶಬ್ದಗಳಲ್ಲಿ ಶಬ್ದಗಳ ಆದಿಯಲ್ಲಿ ಸಂಯುಕ್ತ ವ್ಯಂಜಗಳು ಬರುವುದಿಲ್ಲ. ಬಂದರೆ ಅವು ಬೇರೆ ಬೇರೆ ಭಾಷೆಗಳಿಂದ ಸ್ವೀಕಾರ ಮಾಡಿಕೊಂಡ ಶಬ್ದಗಳಾಗಿರುತ್ತವೆ. ವ್ಯಾವಹಾರಿಕ ಕನ್ನಡದಲ್ಲಿ ಹಾಗೆ ಸ್ವೀಕಾರವಾದ ಶಬ್ದಗಳ ಆದಿಯ ಸಂಯುಕ್ತ ವ್ಯಂಜನಗಳು ವಿರಳವಾಗುತ್ತವೆ.

ಶ್ರೀ – ಸಿರಿ ಸ್ವರ್ಗ – ಸಗ್ಗ

ಪ್ರೀತಿ – ಪಿರೀತಿ ಸ್ಮಶಾನ – ಮಸಣ –ಮಸಾಣ

ಪ್ರಯಾಣ– ಪಯಣ ಕ್ರಯ – ಕಿರಿಯ

೨೯. ಹಳಗನ್ನಡ ಮತ್ತು ಪೂರ್ವದ ಹಳಗನ್ನಡದಲ್ಲಿ ಶಬ್ದಗಳು ಹೆಚ್ಚು ಏಕಾಕ್ಷರ ಉಳ್ಳವಾಗಿದ್ದರೆ ನಡುಗನ್ನಡದಲ್ಲಿ ಮತ್ತು ಹೊಸಗನ್ನಡದಲ್ಲಿ ಏಕಾಕ್ಷರಕ್ಕಿಂತ ದ್ವಯಕ್ಷರ, ತ್ರಯಕ್ಷರ ಶಬ್ದಗಳು ಹೆಚ್ಚಾಗಿ ಕಂಡುಬರುತ್ತವೆ. ಆಡುವ ಕನ್ನಡದಲ್ಲಿ ಇವುಗಳ ಸಂಖ್ಯೆ ಹೆಚ್ಚಾಗಬಹುದಾದ ಅವಕಾಶಗಳಿವೆ.

೩೦. ಎಲ್ಲದಕ್ಕಿಂತ ಪ್ರಮುಖವಾದ ಅಂಶವೆಂದರೆ ಹೊಸಗನ್ನಡ ಹಳಗನ್ನಡ, ಪೂರ್ವದ ಹಳಗನ್ನಡ, ನಡುಗನ್ನಡಕ್ಕಿಂತ ಸರಳವಾಗಿದೆ

ಹೀಗೆ ಒಟ್ಟಾರೆಯಾಗಿ ಹೊಸಗನ್ನಡ ಭಾಷೆಯಲ್ಲಿ ಆಗಿರುವಂತಹ ಲಕ್ಷಣಗಳನ್ನು ಹೇಳಬಹುದಾದರೂ, ನಡುಗನ್ನಡ ಕಾಲದಲ್ಲಿ ಕಾಣಿಸಿಕೊಳ್ಳಲಾರಂಬಿಸಿದ ಉಪಭಾಷೆಗಳು ಹೊಸಗನ್ನಡ ಕಾಲಕ್ಕೆ ಸಂಪೂರ್ಣವಾಗಿ ಗೋಚರಿಸಿದವು. ಇವು ತಮ್ಮದೇ ಆದ ಕೆಲವು ಭಾಷಾ ವೈವಿಧ್ಯವನ್ನು ಹೊಂದಿರುವುದು ಗಮನಾರ್ಹ. ಇಲ್ಲಿ ಉಪಭಾಷೆ ಎಂದರೆ "ಒಂದೇ ಭಾಷೆಯ ಬೇರೆ ಬೇರೆ ಪ್ರಭೇದಗಳು" ಅಥವಾ "ಒಂದೇ ಸಮುದಾಯಕ್ಕೆ ಸೇರಿದ ಜನರು ಆಡುವ ನಾನಾ ವೈವಿಧ್ಯಗಳಿಂದ ಕೂಡಿರುವ ಭಾಷಾ ಪ್ರಭೇದಗಳನ್ನೇ ಉಪಭಾಷೆ" ಎನ್ನಲಾಗುತ್ತದೆ. ಒಂದು ಭಾಷೆಯಲ್ಲಿ ಹಲವು ಸಾಮಾಜಿಕ, ಪ್ರಾದೇಶಿಕ ಭಾಷಾ ಪ್ರಭೇದಗಳಿರುತ್ತವೆ. ಈ ಎಲ್ಲವೂ ಆ ಭಾಷೆಯ ಉಪಭಾಷೆಯಾಗಿರುತ್ತವೆ. ರಾಜಕೀಯ, ಆಡಳಿತಾತ್ಮಕ ಮತ್ತು ಅನ್ಯ ಭಾಷೆಯ ಪ್ರಭಾವ, ಪ್ರಾಕೃತಿಕ ಕಾರಣಗಳು, ಪ್ರಾದೇಶಿಕ, ಸಾಮಾಜಿಕ ಸಂದರ್ಭಕ್ಕನುಗುಣವಾಗಿ ಒಂದು ಭಾಷೆಗೆ ಹಲವು ಉಪಭಾಷೆಗಳು ಸಿದ್ಧಿಸುತ್ತವೆ. ಧ್ವನಿ, ಧ್ವನಿಮಾ, ಆಕೃತಿಮಾ, ವ್ಯಾಕರಣ ವಾಕ್ಯರಚನೆ ಮೊದಲಾದ ಭಾಷಿಕ ಅಂಶಗಳಲ್ಲಿ ಉಪಭಾಷೆಗಳ ನಡುವೆ ವ್ಯತ್ಯಾಸಗಳಿರುತ್ತವೆ.

ಕನ್ನಡದ ಉಪಭಾಷೆಗಳನ್ನು ಹಲವಾರು ವಿದ್ವಾಂಸರು ಬೇರೆ ಬೇರೆ ರೀತಿಯಲ್ಲಿ ವಿಭಾಗಿಸಿದ್ದಾರೆ. ಕೆಲವರು ಪ್ರಾದೇಶಿಕ ಹಿನ್ನಲೆಯಲ್ಲಿ ನೋಡಿದರೆ ಮತ್ತೆ ಕೆಲವರು ಆಡಳಿತದ ಹಿನ್ನಲೆಯಲ್ಲಿ, ಮತ್ತೆ ಕೆಲವರು ಐತಿಹಾಸಿಕವಾಗಿ ವಿಭಾಗಿಸಿಕೊಂಡಿದ್ದಾರೆ.

**೧. ಐತಿಹಾಸಿಕ ಉಪಭಾಷೆಗಳು**

**೨. ಪ್ರಾದೇಶಿಕ ಉಪಭಾಷೆಗಳು**

**೩. ಸಾಮಾಜಿಕ ಉಪಭಾಷೆಗಳು**

ಕೆಲವು ವಿದ್ವಾಸರು ಕನ್ನಡದ ಭಾಷಾ ಚರಿತ್ರೆಯನ್ನಾಧರಿಸಿ ಕಾಲದಿಂದ ಕಾಲಕ್ಕೆ ಕನ್ನಡದಲ್ಲಿ ಆದ ಭಾಷಿಕ ಬದಲಾವಣೆಗಳನ್ನು ಐತಿಹಾಸಿಕ ಉಪಭಾಷಾ ವರ್ಗೀಕರಣದಲ್ಲಿ ದಾಖಲಿಸಿದ್ದಾರೆ. ಈ ವರ್ಗೀಕರಣ ನಾಲ್ಕು ಭಾಗಗಳಲ್ಲಿದೆ.

**೧.ಪೂರ್ವದ ಹಳಗನ್ನಡ**

**೨.ಹಳಗನ್ನಡ**

**೩.ನಡುಗನ್ನಡ**

**೪.ಹೊಸಗನ್ನಡ**

ಈ ವರ್ಗೀಕರಣ ಕುರತಾಗಿ ಪೂರ್ವದಲ್ಲೇ ಬಹಳ ದೀರ್ಘವಾಗಿ ಚರ್ಚೆ ಮಾಡಲಾಗಿದೆ

ಪ್ರತಿಯೊಂದು ಜಿಲ್ಲೆಯಲ್ಲಿ ಮಾತನಾಡುವ ಭಾಷೆ ಆ ಪ್ರದೇಶದ ಪ್ರಾದೇಶಿಕ ಉಪಭಾಷೆಗಳು. ಪ್ರಾದೇಶಿಕ ಉಪಭಾಷೆಗಳು ಕರ್ನಾಟಕದ ಇಪ್ಪತ್ತೇಳು ಜಿಲ್ಲೆಗೊಂದರಂತೆ ಹಲವಾರಿವೆ. ಅಧ್ಯಯನದ ದೃಷ್ಟಿಯಿಂದ ಕನ್ನಡದ ಪ್ರಾದೇಶಿಕ ಉಪಭಾಷೆಗಳನ್ನು ನಾಲ್ಕು ಮುಖ್ಯ ಭಾಗಗಳಾಗಿ ಮಾಡಿಕೊಳ್ಳಲಾಗಿದೆ.

**೧.ಮೈಸೂರು ಕನ್ನಡ**

**೨.ಧಾರವಾಡ ಕನ್ನಡ**

**೩.ಗುಲ್ಬರ್ಗಾ ಕನ್ನಡ**

**೪.ಕರಾವಳಿ ಕನ್ನಡ**

ಕರ್ನಾಟಕದಲ್ಲಿ ನೆಲೆಸಿರುವ ಪ್ರತಿಯೊಂದು ಜಾತಿ, ವರ್ಗ, ಬುಡಕಟ್ಟುಗಳದೂ ಒಂದೊಂದು ಸಾಮಾಜಿಕ ಉಪಭಾಷೆಯಾಗಿದೆ. ಅಧ್ಯಯನದ ದೃಷ್ಟಿಯಿಂದ ಆರು ಬುಡಕಟ್ಟುಗಳ ಭಾಷೆಯನ್ನು ಸಾಮಾಜಿಕ ಉಪಭಾಷೆಗಳಾಗಿ ಆಯ್ದುಕೊಳ್ಳಲಾಗಿದೆ.

**೧.ಕೊರಗ ಕನ್ನಡ**

**೨.ಗೊಂಡರ ಕನ್ನಡ**

**೩.ಜೇನು ಕುರುಬರ ಕನ್ನಡ**

ಇದಲ್ಲದೆ ಜೇನು ಕುರುಬ ಕನ್ನಡ, ಇಲ್ಲಿಗರ ಕನ್ನಡ, ಕರೆ ಒಕ್ಕಲಿಗರ ಕನ್ನಡ, ಹವ್ಯಕ ಕನ್ನಡ, ಬಡಗ ಕನ್ನಡ, ಬ್ರಾಹ್ಮಣ ಕನ್ನಡ, ಕಲ್ಲು ಒಡ್ಡರ ಕನ್ನಡ, ಗೊಲ್ಲರ ಕನ್ನಡ, ಬಡಗಿ ಕನ್ನಡ,ಸೋಲಿಗರ ಕನ್ನಡ ಹೀಗೆ ಹಲವಾರು ಸಾಮಾಜಿಕ ಉಪಭಾಷೆಗಳನ್ನು ಕಾಣಹುದು.

ಅಧ್ಯಯನದ ದೃಷ್ಟಿಯಿಂದ ಈ ಮೂರು ಸಾಮಾಜಿಕ ಉಪಭಾಷೆಗಳನ್ನು ತಗೆದುಕೊಳ್ಳಲಾಗಿದೆ.

## ಪ್ರಾದೇಶಿಕ ಉಪಭಾಷೆ

ಕರ್ನಾಟಕ ವಿಶಾಲವಾದ ಭೂಪ್ರದೇಶವನ್ನು ಹೊಂದಿದೆಯಾದ್ದರಿಂದ ಇಲ್ಲಿ ಪ್ರಾದೇಶಿಕ ಉಪಭಾಷೆಗಳು ಹೆಚ್ಚಾಗಿವೆ. ಕಾಡು, ಬೆಟ್ಟ, ನದಿ, ಪರ್ವತ, ಪ್ರಾಕೃತಿಕ ಅಡೆತಡೆಗಳು , ಅನ್ಯ ಭಾಷಿಗರ ಆಡಳಿತ, ಆಕ್ರಮಣಕ್ಕೆ ಒಳಗಾಗಿದ್ದ ಕನ್ನಡದ ಹಲವು ಪ್ರದೇಶಗಳು ಭಿನ್ನ ಭಾಷಿಕ ರೂಪಗಳನ್ನು ಹೊಂದಲು ಕಾರಣವಾಗಿದೆ. ಕರ್ನಾಟಕದ ಉತ್ತರಕ್ಕೆ ಮಹಾರಾಷ್ಟ್ರ, ಪಶ್ಚಿಮಕ್ಕೆ ಕೇರಳ, ಉತ್ತರ ಪಶ್ಚಿಮಕ್ಕೆ ಗೋವ ರಾಜ್ಯಗಳಿರುವುದರಿಂದ ಕರ್ನಾಟಕದ ಗಡಿ ಪ್ರದೇಶಗಳಲ್ಲಿ ಪ್ರಾದೇಶಿಕ ಉಪಭಾಷೆಗಳು ಹೆಚ್ಚಿವೆ. ಗಡಿ ಪ್ರದೇಶಗಳ ಭಾಷಾ ರೂಪಗಳಲ್ಲಿ ತಮಿಳು, ಮಲೆಯಾಳ, ಕೊಂಕಣಿ, ಮರಾಠಿ, ತೆಲುಗು ಭಾಷೆಗಳ ಪ್ರಭಾವವನ್ನು ಕಾಣಬಹುದು. ಪಶ್ಚಿಮ ಘಟ್ಟಗಳ ಉತ್ತರದ ಬೆಟ್ಟಗಳು ಕರಾವಳಿ ಪ್ರದೇಶಗಳಲ್ಲಿ ಮಲೆಯಾಳಂನ ಪ್ರಭಾವ ಕಂಡುಬಂದರೆ, ಚಾಮರಾಜ ನಗರ, ಕೊಳ್ಳೇಗಾಲ, ಬೆಂಗಳೂರು ಮುಂತಾದ ಕಡೆ ತಮಿಳಿನ ಪ್ರಭಾವ ಇರುವುದನ್ನು ಕಾಣಬಹುದು. ಹೀಗೆ ಬೇರೆ ಭಾಷೆಯ ಪ್ರಭಾವದಿಂದಾಗಿ ಪ್ರಾದೇಶಿಕ ಉಪಭಾಷೆಗಳು ಉಂಟಾಗುತ್ತದೆ.

ಇಂತಹ ಉಪಭಾಷೆಗಳ ಮೂಲ ಭಾಷೆ ಒಂದೇ ಆಗಿದ್ದರೂ ಇವುಗಳಲ್ಲಿ ಕೆಲವು ಧ್ವನಿ, ಧ್ವನಿಮಾ, ಆಕೃತಿಮಾ, ವ್ಯಾಕರಣಾಂಶಗಳ ವೈಶಿಷ್ಟ್ಯಗಳನ್ನು ಕಾಣಬಹುದಾಗಿದೆ.

## ೧.ಮೈಸೂರು ಕನ್ನಡ:-

ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ ಎಂದೇ ಹೆಸರಾಗಿರುವ ಮೈಸೂರು ಪ್ರದೇಶದಲ್ಲಿನ ಭಾಷೆ ಶಿಷ್ಟ ಭಾಷೆಯಾಗಿದೆ. ಅಂದರೆ ಸಾಹಿತ್ಯ, ಪಠ್ಯ ವಿಷಯ, ಪತ್ರಿಕೆಗಳು, ಸಿನೆಮಾ, ಟಿ.ವಿ ಮುಂತಾದ ಕಡೆಗಳಲ್ಲಿ ಬಳಕೆಯಾಗುವಂತಹ ಭಾಷೆಯಾಗಿದೆ. ಇದರ ಜೊತೆಗೆ ಇದು ಐತಿಹಾಸಿಕವಾಗಿಯೂ ಹಾಗೂ ಆಡಳಿತಾತ್ಮಕವಾಗಿಯೂ ವ್ಯಾಪಕವಾಗಿದ್ದಂತಹ ಭಾಷೆ ಆಗಿದೆ. ಈ ಭಾಷೆಯ ಮೇಲೆ, ಮಲಯಾಳ, ತೆಲುಗು, ತಮಿಳು ಇದರ ಜೊತೆಗೆ ಧಾರವಡ, ಶಿವವೊಗ್ಗ ಮುಂತಾದ ಭಾಷೆಗಳ ಪ್ರಭಾವ ಹೆಚ್ಚಾಗಿದ್ದರೂ

ಭಾಷೆಯಲ್ಲಿ ಗಟ್ಟಿತನವನ್ನು ಉಳಿಸಿಕೊಂಡಿದೆ. ಇದರ ಜೊತೆಗೆ ಸಾಮಾಜಿಕ ಉಪಭಾಷೆಗಳಾದ ಒಕ್ಕಲಿಗರು, ಸೋಲಿಗರು, ಕೊರಗರು, ಗೊಲ್ಲರ ಕನ್ನಡವು ಈ ಭಾಷಾ ವೈವಿದ್ಯದಡಿಯಲ್ಲಿಯೇ ಬರುವಂತಹದ್ದು. ಈಭಾಷಾ ಪ್ರಭೇದದ ವೈಶಿಷ್ಟ್ಯವನ್ನು ಈ ಕೆಳಕಂಡಂತೆ ನೋಡಬಹುದು.

೧. ಮೈಸೂರು ಕನ್ನಡದಲ್ಲಿ ಬಳಕೆಯಲ್ಲಿರುವ ಸ್ವರ ಧ್ವನಿಮಾಗಳಲ್ಲಿ ಹತ್ತು ಪ್ರಧಾನ ಸ್ವರ ಧ್ವನಿಗಳಿವೆ. ಅ, ಇ, ಉ, ಎ, ಒ ಐದು ಹ್ರಸ್ವ ಸ್ವರಗಳಾಗಿವೆ. ಆ, ಈ, ಊ, ಏ, ಓ ಇವುಗಳು ದೀರ್ಘ ಸ್ವರಗಳು. ಅ,ಇ,ಉ,ಎ,ಒ ಕೆಲವು ವೇಳೆ ಸ್ವತಂತ್ರ ಧ್ವನಿಮಾಗಳಾಗಿ ಬಳಕೆಗೊಳ್ಳುತ್ತವೆ. ಅಲ್ಲದೆ ಎ, ಏ, ಒ, ಓ ಸ್ವರಗಳು ಅವಿದ್ಯಾವಂತರಲ್ಲಿ ಯ ಕಾರ ವ ಕಾರವಾಗಿ ಪ್ರಯೋಗಗೊಳ್ಳುತ್ತವೆ.

ಎ:– ಬೇರೆ – ಬ್ಯರೆ ಏ:– ಕೇರೆ – ಕ್ಯಾರೆ

ಒ:– ಗೊನೆ – ಗ್ವನೆ ಓ:– ಗೋಡೆ – ಗ್ವಾಡೆ

೨. ಲಘು ಅಕ್ಷರಗಳಿರುವ ಪದಗಳಲ್ಲಿ ಅಕ್ಷರ ಲೋಪವಾಗುತ್ತದೆ. ಮೂರು ಅಕ್ಷರದ ಪದದಲ್ಲಿ ಸಾಮಾನ್ಯವಾಗಿ ಮೂರನೇ ಅಕ್ಷರ ಲೋಪವಾಗುತ್ತದೆ.

ಅಗಸ– ಅಗ್ಸ, ಕೂದಲು–ಕೂದ್ಲು, ಕನ್ನಡಕ–ಕನ್ನಡ್ಕ,

೩. ಕೆಲವು ಶಬ್ದಗಳಲ್ಲಿ ಕಂಠ್ಯ 'ಕ' ವ್ಯಂಜನ ತಾಲವ್ಯ 'ಚ' ಕಾರವಾಗಿ ತಾಲವ್ಯೀಕರಣಗೊಂಡಿದೆ.

ಕೆರೆ– ಚೆರೆ, ಕಿವಿ– ಚಿವಿ

೪. ಕೆಲವು ಶಬ್ದಗಳಲ್ಲಿ ಆದಿಯ ವ ಕಾರ ಉಚ್ಚಾರಣೆಯಲ್ಲಿ ಕೆಲವು ವೇಳೆ ಬಿದ್ದುಹೋಗುತ್ತದೆ.

ವಿಮಾನ>ಇಮಾನ, ವಿಸ>ಇಸ, ವಿಭೂತಿ>ಇಭೂತಿ,

೫. ಶಿವಮೊಗ್ಗ, ಚಿತ್ರದುರ್ಗ, ದಾವಣಗೆರೆ ಜಿಲ್ಲೆಯ ಉತ್ತರ ಭಾಗದ ತಾಲ್ಲುಕುಗಳಲ್ಲಿ ಧಾರವಾಡ ಕನ್ನಡದ ಪ್ರಭಾವದಿಂದಾಗಿ ನಾಮಪದಗಳ ಅಂತ್ಯ ಸ್ವರ ಎ ಕಾರವು ಇ ಕಾರವಾಗಿ ಬದಲಾಗುತ್ತದೆ. ಉ ಕಾರಾಂತ ನಾಮ ಪ್ರಕೃತಿಗಳು ಅ ಕಾರವಾಗುತ್ತವೆ.

ಕೋಣೆ–ಕ್ವಾಣಿ, ಕೆನೆ–ಕೆನಿ, ಸಕ್ಕರೆ–ಸಕ್ರಿ, ಹಸು–ಹಸ, ಹಲ್ಲು–ಹಲ್ಲ,

೬. ಆಡುಮಾತಿನಲ್ಲಿ ಏಕಾಕ್ಷರ ನಾಮಪ್ರಕೃತಿಗಳು ಮತ್ತು ಕ್ರೀಯಾಪ್ರಕೃತಿಗಳು ಸ್ವಚ್ಚಂದವಾಗಿ ಬಳಕೆಯಾಗುತ್ತವೆ.

ಚಹ–ಚಾ, ಹೂವು–ಹೂ, ಸಿಹಿ–ಸೀ, ತರು–ತಾ, ಬರು–ಬಾ

೭. ಮೈಸೂರು ಕನ್ನಡದಲ್ಲಿ ಸರ್ವನಾಮಗಳಿವೆ. ಉತ್ತಮ ಪುರುಷ ಏಕವಚನ ನಾನು, ನಾ ಆಗುತ್ತದೆ. ಮಧ್ಯಮಪುರುಷ ಏಕವಚನ ನಾವು, ನಾಮು, ನಾವ್ ಆಗುತ್ತದೆ. ನೀನು, ನೀ ಬಹುವಚನದಲ್ಲಿ ನೀನು, ನೀಮು, ನೀವ್ ಎಂದಿದೆ. ಪ್ರಥಮ ಪುರುಷ ಪುಲ್ಲಿಂಗ ಸರ್ವನಾಮ ಏಕವಚನದಲ್ಲಿ ಅವನು, ಅವ್ನು, ಅವ ಬಹುವಚನದಲ್ಲಿ ಅವ್ರು, ಅವರು ಎಂದಾಗಿದೆ. ಸ್ತ್ರೀಲಿಂಗ ಏಕವಚನ ಅವ್ಳು, ಅವಳು, ಆಕೆ, ಆಕಿ, ಆಗಿದೆ. ನಪುಂಸಕ ಲಿಂಗದಲ್ಲಿ ಅದು, ಅವು, ಎಂಬ ಸರ್ವನಾಮಗಳಿವೆ. ಯಾವ್ನು, ಯಾರ, ಯಾವೊಂದು, ಯಾರು, ಯಾವ್ಳು, ಯಾವೊಳು, ಯಾವ್ದು, ಯಾವುದು ಎಂಬುವು ಪ್ರಶ್ನಾರ್ಥಕ ಸರ್ವನಾಮಗಳಾಗಿವೆ.

೮. ಮೈಸೂರು ಕನ್ನಡದಲ್ಲಿ ಸಪ್ತಮಿ ವಿಭಕ್ತಿ ಪ್ರತ್ಯಯ ದ್ವಿತ್ವದ ಬದಲಾಗಿ ಸ್ವರ ದೀರ್ಘಗೊಳ್ಳುವುದು. ಗುರುವಿನಲ್ಲಿ>ಗೂರೂಲಿ, ಮನೆಯಲ್ಲಿ>ಮನೇಲಿ, ದ್ವಿತೀಯ ವಿಭಕ್ತಿ ಪ್ರತ್ಯಯ ಅನ್ನು ದೀರ್ಘವಾಗಿ ಬರುತ್ತದೆ. ಕೊಡ್ಲಿಯನ್ನು ತಾ>ಕೊಡ್ಲಿ ತಾ, ಮರವನ್ನೇರು>ಮರವೇರು.

ಇವಲ್ಲದೆ ಕಾಲಸೂಚಕ ಪ್ರತ್ಯಯಗಳು, ಕ್ರಿಯಾ ವಿಶೇಷಣಗಳು ಮುಂತಾದ ಅಂಶಗಳಲ್ಲಿ ಮೈಸೂರು ಕನ್ನಡ ವಿಶೇಷವಾದ ಭಾಷಾ ವೈವಿಧ್ಯವನ್ನು ಹೊಂದಿದೆ

**೨.ಧಾರವಾಡ ಕನ್ನಡ:–**

ಧಾರವಾಡ ಕನ್ನಡ ಹಾವೇರಿ, ದಾವಣಗೆರೆ, ಗದಗ ಜಿಲ್ಲೆ ಹಾಗು ಶಿವಮೊಗ್ಗ, ಚಿತ್ರದುರ್ಗ ಜಿಲ್ಲೆಯ ಉತ್ತರ ಭಾಗ, ಬಳ್ಳಾರಿ ಜಿಲ್ಲೆಯ ಪಶ್ಚಿಮ ಭಾಗ ಮತ್ತು ದಕ್ಷಿಣ ಭಾಗದ ಕೆಲವು ತಾಲ್ಲೋಕು, ಬೆಳಗಾವಿ ಜಿಲ್ಲೆ, ಬಿಜಾಪುರ ಜಿಲ್ಲೆಯ ದಕ್ಷಿಣ ಭಾಗಗಳಲ್ಲಿ ಬಳಕೆಯಲ್ಲಿರುವ ಕನ್ನಡ ಭಾಷಾ ರೂಪಗಳನ್ನೇ ಧಾರವಾಡ ಕನ್ನಡ ಎಂದು ಕರೆಯಲಾಗುತ್ತದೆ, ಹಿಂದೆ ಮುಂಬೈ ಕರ್ನಾಟಕದ ಆಳ್ವಿಕೆಗೆ ಒಳಪಟ್ಟಿದ್ದರಿಂದ ಧಾರವಾಡ, ಬೆಳಗಾವಿ, ಬಿಜಾಪುರ ಪ್ರದೇಶಗಳ ಮೇಲೆ ಮರಾಠಿ, ಕೊಂಕಣಿ, ಉರ್ದು ಭಾಷೆಗಳ ಪ್ರಭಾವವನ್ನು ಕಾಣಬಹುದು. ಈ ಭಾಗದ ಭಾಷಾ ವೈಶಿಷ್ಯಗಳು ಇಂತಿವೆ.

೧. ಧಾರವಾಡ ಕನ್ನಡದಲ್ಲಿ ಉ ಕಾರಾಂತ ಪದಗಳೆಲ್ಲವೂ ಇ ಕಾರಾಂತವಾಗುತ್ತವೆ.

ಮನೆ – ಮನಿ, ಕೆರೆ – ಕೆರಿ, ಕುದುರೆ – ಕುದ್ರಿ, ಬೆಲೆ – ಬೆಲಿ,

೨. ಕೆಲವು ಶಬ್ದಗಳಲ್ಲಿ ಆ ಕಾರಾಂತವಾದ ನಾಮಪ್ರಕೃತಿಗಳಿವೆ.

ಗಾಣಿಗ್ಯಾ, ಬಣಜಿಗ್ಯಾ, ಬಡಿಗ್ಯಾ, ಯೋಗ್ಯಾ

೩. ಧಾರವಾಡ ಕನ್ನಡದಲಿ ಉ ಕಾರಾಂತವಾದ ನಾಮಪದಗಳು ಅ ಕಾರಾಂತವಾಗುತ್ತವೆ.

ಅದು–ಅದ, ಇವತ್ತು–ಇವತ್ತ, ಆಫೀಸು–ಆಫೀಸ, ಊರು–ಊರ

೪. ಧಾರವಾಡ ಕನ್ನಡದಲ್ಲಿ ಏಕವಚನ ಸೂಚಿಸಲು ಪ್ರತ್ಯೇಕ ಪ್ರತ್ಯಯವಿಲ್ಲ. ಆದರೆ ಬಹುವಚನಕ್ಕೆ

ಆರು, ರ‍್ರು, ದೇರ, ಕ್ಳ, ಗುಳು, ಗೊಳು ಎಂಬ ಹಲವು ಪ್ರತ್ಯಯಗಳಿವೆ.

ತಂಗ್ಯಾರು, ಬೇಡ್ರು, ಅಣ್ಣದೇರ, ಅತ್ತಿಗುಳು, ಬಾವಿಗೊಳ

೫. ಸಂಬಂಧ ವಾಚಕಗಳು ಸಂಭೋಧನೆಯಲ್ಲಿ 'ಯ' ಕಾರವನ್ನು ಪಡೆಯುತ್ತವೆ. ರಾಮೋ, ರಾಮಾ – ರಾಮ್ಯಾ, ಭೀಮೋ, ಭೀಮಾ–ಭೀಮ್ಯಾ, ಅಕ್ಕಾ–ಯಕ್ಕಾ, ಅಣ್ಣಾ–ಯಣ್ಣಾ.

೬. ಧಾರವಾಡ ಕನ್ನಡದಲ್ಲಿ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗ ವಿವಕ್ಷೆಯಿದೆ. ಕೆಲವು ವೇಳೆ ಪುಲ್ಲಿಂಗ, ಸ್ತ್ರೀಲಿಂಗಗಳು ವಿಕಲ್ಪವಾಗಿ ನಪುಂಸಕಲಿಂಗಗಳಾಗುತ್ತವೆ. ಈ ನಪುಂಸಕ ಲಿಂಗದಲ್ಲಿ ಬಹುವಚನ ಬಳಕೆಯಾಗುತ್ತದೆ.

ಅಮ್ಮ ಬತ್ತ್–ಅಮ್ಮ ಬಂದಳು, ಅದ್ ಹೋತ್– ಅದು ಹೋಯಿತು

೭. ಧಾರವಾಡ ಕನ್ನಡದಲ್ಲಿ ಸಂಖ್ಯಾವಾಚಕಗಳು ವಿಶೇಷವಾಗಿದ್ದು ಈ ಸಂಖ್ಯಾವಾಚಕಗಳ ಮೇಲೆ ಮರಾಠಿ ಪ್ರಭಾವವನ್ನು ಕಾಣಬಹುದು.

ದೀಡ್–ಒಂದೂವರೆ, ಅಡೀಚ್–ಎರಡೂವರೆ, ತೀರ್ಸ– ಮೂರನೇ, ಪೂಸೀ–ಮುಕ್ಕಾಲು, ಪನ್ನಾಸ್–ಐವತ್ತು, ಬಾರ–ಹನ್ನೆರಡು, ಶಂಬೂರ–ಶಂಬರ–ನೂರು, ಪಂಚಾಮೀಸ್–ಇಪ್ಪತ್ತೈದು, ಹಜಾರ್–ಸಾವಿರ

ಹೀಗೆ ಧಾರವಾಡ ಭಾಷೆಯಲ್ಲಿ ಮರಾಠಿ, ಉರ್ದು, ಕೊಂಕಣಿಯ ಪ್ರಭಾವ ಕಂಡುಬಂದರೂ ಹಲವಾರು ವಿಶಿಷ್ಟ ಲಕ್ಷಣಳನ್ನು ಉಳಿಸಿಕೊಂಡು ಬಂದಿದೆ.

## ೩.ಗುಲ್ಬರ್ಗ ಕನ್ನಡ:–

ಕನ್ನಡದ ಪ್ರಮಾಣದ ಭಾಷೆಗೆ ದೂರದಲ್ಲಿರುವ ಹಾಗೂ ಮರಾಠಿ, ಉರ್ದು, ತೆಲುಗು ಭಾಷೆಗಳಿಂದ ಅತ್ಯಂತವಾಗಿ ಪ್ರಭಾವಿತವಾಗಿರುವ ಕನ್ನಡದ ಸಾಮಾಜಿಕ ಉಪಭಾಷೆಯೆಂದರೆ ಗುಲ್ಬರ್ಗ ಕನ್ನಡ. ಬೀದರ್, ಗುಲ್ಬರ್ಗಾ, ಬಾಗಲಕೋಟೆ, ರಾಯಚೂರು

ಜಿಲ್ಲೆಗಳಲ್ಲಿ ಈ ಭಾಷೆ ಬಳಕೆಯಲ್ಲಿದೆ. ಈ ಪ್ರದೇಶ ಪ್ರಾಚೀನ ಕಾಲದಲ್ಲಿ ತಿರುಳಗನ್ನಡ ಪ್ರದೇಶವಾಗಿತ್ತು. ಈ ಪ್ರದೇಶಗಳು ಮಹಮದೀಯರು ಮತ್ತು ಮರಾಠರ ಆಳ್ವಿಕೆಗೆ ಒಳಪಟ್ಟಾಗ ಉರ್ದು, ಮರಾಠಿ, ತೆಲುಗು ಭಾಷೆಗಳು ಆಡಳಿತ ಭಾಷೆಯಾಗಿದ್ದರಿಂದ ಅದರ ಪ್ರಭಾವವನ್ನು ಈ ಉಪಭಾಷೆಯಲ್ಲಿ ಗುರುತಿಸಬಹುದು.

ಗುಲ್ಬರ್ಗಾ ಕನ್ನಡ ಸಾಹಿತ್ಯಕವಾಗಿ, ಐತಿಹಾಸಿಕವಾಗಿ ಮಹತ್ವದ ಭಾಷೆಯಾಗಿತ್ತೆಂಬುದನ್ನು ಕವಿರಾಜಮಾರ್ಗಕಾರ ಗುರುತಿಸುತ್ತಾನೆ. ಈತ ಹೇಳುವ ಕಿಸುವೊಳಲು, ಮಹಾಕೋಪಣ, ಪುಲಿಗೆರೆ, ಒಕ್ಕುಂದದ ನಡುವಣ ಪ್ರದೇಶ ಇದೆ. ಹಾಗೂ ಪಂಪ ಕವಿ ಹೇಳುವ ಪುಲಿಗೆರೆಯ ಕನ್ನಡದ ಪ್ರದೇಶವು ಇದೇ ಆಗಿದೆ. ೧೨ನೇ ಶತಮಾನದ ಹೊತ್ತಿಗೆ ವೈಭವಯುತವಾಗಿ ಮೆರೆದ ಈ ಭಾಷೆ ನಂತರದಲ್ಲಿ ಮುಸ್ಲಿಂ ದಾಳಿಗೆ ತುತ್ತಾಗಿ ಅವರ ಆಡಳಿತಕ್ಕೆ ಒಳಪಟ್ಟಿತ್ತು. ಇದರಿಂದಾಗಿ ಉರ್ದು ಆಡಳಿತ ಭಾಷೆಯಾಗಿ ಜಾರಿಗೆ ಬಂದಿತು. ವಿಜಯನಗರದ ಅರಸರ ಆಡಳಿತ ಅವಧಿಯಲ್ಲಿ ಕನ್ನಡ ಚೈತನ್ಯವನ್ನು ಪಡೆದುಕೊಂಡಿತು. ಆದರೂ ಬೀದರ್, ಬಿಜಾಪುರಗಳು ಬಹುಮನಿ ಸುಲ್ತಾನರ ರಾಜಧಾನಿಗಳಾಗಿದ್ದವು. ಇದರಿಂದಾಗಿ ಗುಲ್ಬರ್ಗಾ ಕನ್ನಡದ ಮೇಲೆ ಪಾರ್ಸಿ, ಉರ್ದು ಭಾಷೆಗಳ ಪ್ರಭಾವವೂ ಆಯಿತು ಪರಿಣಾಮವಾಗಿ ಕನ್ನಡದ ಊರುಗಳ ಹೆಸರು ಉರ್ದುವಾಗಿ ಬದಲಾವಣೆಗೊಂಡವು. ಉದಾ: ಪಾಲ್ಮೂರು>ಮಹಬೂಬ್ ನಗರ, ಇಂದೂರು>ನಿಜಾಮಬಾದ್, ಗುಲ್ಬರ್ಗಾದ ಮೂಲ ಕನ್ನಡದ ಹೆಸರು ಕಲುಬುರುಗೆ.

ಇಂತಹ ಐತಿಹಾಸವುಳ್ಳ ಈ ಭಾಷೆಯಲ್ಲಿ ಕೆಲವು ಪ್ರಮುಖ ಲಕ್ಷಣಗಳನ್ನು ಕಾಣಬಹುದಾಗಿದೆ.

೧. ಗುಲ್ಬರ್ಗಾ ಕನ್ನಡದಲ್ಲಿ ಹದಿನಾಲ್ಕು ಸ್ವರ ಧ್ವನಿಮಾಗಳಿವೆ. ಇವುಗಳಲ್ಲಿ ಐದು ಹ್ರಸ್ವ ಸ್ವರ ಧ್ವನಿಮಾಗಳು, ಐದು ದೀರ್ಘ ಸ್ವರ ಧ್ವನಿಮಾಗಳು ಸೇರಿವೆ. ಇಲ್ಲಿ ಹತ್ತು ಸ್ವರ ಧ್ವನಿಗಳು ಪ್ರಧಾನವಾದವು ಉಳಿದ ನಾಲ್ಕು ಧ್ವನಿಮಾಗಳು ಗೌಣವಾದವು. ಋ, ೠ, ಐ, ಔ, ಅಂ, ಅಃ ಇವು ಸಹಜವಾಗಿ ಬಳಕೆಯಲ್ಲಿಲ್ಲ. ವಿದ್ಯಾವಂತರು ಮತ್ತು ಬ್ರಾಹ್ಮಣರ ಕನ್ನಡ ಆಡುಮಾತಿನಲ್ಲಿ ಮಾತ್ರ ಉಳಿದುಕೊಂಡಿವೆ. ಇಪ್ಪತ್ತೈದು ವ್ಯಂಜನ ಧ್ವನಿಮಾಗಳು ಸಹಜವಾಗಿವೆ. ಫ಼, ಖ, ಜ಼, ಎಂಬ ವ್ಯಂಜನಗಳು ಹೊಸದಾಗಿ ಸೇರಿವೆ. ಸ, ಶ ಸ್ವತಂತ್ರ ಧ್ವನಿಮಾಗಳಾಗಿ ಬಳಕೆಗೊಂಡಿವೆ. ಷ ಕಾರ ಸ ಕಾರದಲ್ಲಿ ಐಕ್ಯವಾಗುತ್ತದೆ.

ಮಹಾಪ್ರಾಣಗಳು ಸಹಜವಾಗಿ ಇಲ್ಲ ಇದ್ದರೂ ಉರ್ದು ಮರಾಠಿಗಳ ಪ್ರಭಾವ ಮತ್ತು ಉಚ್ಚಾರದ ಒತ್ತಡದಿಂದ ಮಾತ್ರ ಕಾಣಿಸಿಕೊಳ್ಳುತ್ತದೆ.

೨. ಗುಲ್ಬರ್ಗಾ ಕನ್ನಡದಲ್ಲಿ ವಿಶೇಷ ಜ಼ಕಾರ ಖ಼ಕಾರ, ಫ಼ಕಾರಗಳ ಅರಬ್ಬಿ, ಉರ್ದು ಶಬ್ದಗಳ ಪ್ರಭಾವದಿಂದ ಬಳಕೆಯಲ್ಲಿದೆ.

ಬೀಜ಼, ಬಜ಼ಾರ್, ಖಜ಼ೂರ, ಹಜ಼ಾರ್, ಪಾಯಿದೆ>ಫ಼ಾಯ್ದೆ, ಸಿರ್ಫ [ವಿನಹ], ದವಾಖಾನೆ [ಆಸ್ಪತ್ರೆ], ದುಖಾನ್ [ಅಂಗಡಿ]

೩. ಕೆಲವು ನಾಮಪದಗಳ ಎ ಕಾರಾಂತ ಶಬ್ದಗಳು ಗುಲ್ಬರ್ಗಾ ಕನ್ನಡದಲ್ಲಿ ಕೆಲವು ವೇಳೆ ಇ ಕಾರಾಂತವಾಗುತ್ತದೆ.

ಕುದ್ರೆ–ಕುದ್ರಿ, ಉಣ್ಣೆ–ಉಣ್ಣಿ, ಕೆರೆ–ಕೆರಿ, ಕಟ್ಟೆ–ಕಟ್ಟಿ,

೪. ಕೆಲವು ಶಬ್ದಗಳಲ್ಲಿ ಅ ಕಾರಾದಿಯಾದ ಸಂಬಂಧವಾಚಕಗಳು ಯ ಕಾರದಿಂದ ಕೆಲವು ವೇಳೆ ಆರಂಭವಾಗುತ್ತವೆ.

ಅಣ್ಣ–ಯಣ್ಣ, ಅಪ್ಪ–ಯಪ್ಪ, ಅಕ್ಕ–ಯಕ್ಕ, ಅತ್ತೆ–ಯತ್ತೆ,

೫. ಗುಲ್ಬರ್ಗಾ ಕನ್ನಡದಲ್ಲಿ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕ ಲಿಂಗಗಳಿವೆ. ಸ್ತ್ರೀಲಿಂಗ ಕೆಲವು ವೇಳೆ ನಪುಂಸಕ ಲಿಂಗದಲ್ಲಿ ಐಕ್ಯವಾಗುತ್ತದೆ. ಇಲ್ಲಿ ವಿಭಕ್ತಿ ಪಲ್ಲಟ ಸಾಮಾನ್ಯವಾಗಿದೆ. ದ್ವಿತೀಯ ವಿಭಕ್ತಿ 'ಅನ್ನು' ವಿಗೆ ಬದಲಾಗಿ ಚತುರ್ಥಿ ವಿಭಕ್ತಿ ಬರುತ್ತದೆ.

ಹೀಗೆ ಅನ್ಯದೇಶೀ ಶಬ್ದಗಳ ಪ್ರಭಾವದಿಂದ ಧ್ವನಿ, ಧ್ವನಿಮಾ, ಆಕೃತಿಮಾ ಮುಂತಾದವುಗಳಲ್ಲಿ ಸಾಕಷ್ಟು ದೇಶೀ ಲಕ್ಷಣಗಳನ್ನು ಕಳೆದುಕೊಂಡಿದೆ.

**೪.ಕರಾವಳಿ ಕನ್ನಡ:–**

ಮಂಗಳೂರಿನಿಂದ ಕಾರವಾರದವರೆಗೆ ಹರಡಿಕೊಂಡಿರುವ ಪ್ರದೇಶವೇ ಕರಾವಳಿ ಪ್ರದೇಶ. ಇಲ್ಲಿ ಬಳಕೆಯಲ್ಲಿರುವ ಕನ್ನಡವೇ ಕರಾವಳಿ ಕನ್ನಡ. ಇಲ್ಲಿ ಬಳಕೆಯಲ್ಲಿರುವ ಕನ್ನಡವನ್ನು ದಕ್ಷಿಣ ಕರಾವಳಿ ಕನ್ನಡ ಮತ್ತು ಉತ್ತರ ಕರಾವಳಿ ಕನ್ನಡವೆಂದು ವಿಭಾಗಿಸಬಹುದು. ದಕ್ಷಿಣ ಕರಾವಳಿ ಕನ್ನಡ, ತುಳು, ಮಲೆಯಾಳ, ಕೊಂಕಣಿ ಭಾಷೆಗಳ ಪ್ರಭಾವಕ್ಕೆ ಒಳಗಾಗಿದ್ದರೆ, ಉತ್ತರ ಕರಾವಳಿ ಕನ್ನಡ ಕೊಂಕಣಿ, ಮರಾಠಿ ಭಾಷೆಗಳ ಪ್ರಭಾವಕ್ಕೆ ಒಳಗಾಗಿದೆ. ಹಳಗನ್ನಡದ ಭಾಷಿಕ ರೂಪ ಕರಾವಳಿ ಕನ್ನಡದಲ್ಲಿ ಉಳಿದಿದೆ ಮತ್ತು ಧಾರವಾಡ ಹಾಗೂ ಗುಲ್ಬರ್ಗ ಕನ್ನಡದಲ್ಲಿ ಆಗಿರುವಷ್ಟು ಭಾಷಿಕ ಬದಲಾವಣೆ ಇದರಲ್ಲಿ ಕಂಡುಬರುವುದಿಲ್ಲ. ಈ ಉಪಭಾಷೆಯಲ್ಲಿ ಎರಡು ವಿಧಗಳನ್ನು ಗುರುತಿಸಬಹುದು. ೧.

ದಕ್ಷಿಣ ಕರಾವಳಿ ಕನ್ನಡ– ಇದರಲ್ಲಿ ಗೌಡ ಕನ್ನಡ, ಶಿವಳ್ಳಿ ಕನ್ನಡ, ಹವ್ಯಕ ಕನ್ನಡ ಎಂಬ ಉಪ ಪ್ರಭೇದವನ್ನು ಕಾಣಬಹುದು. ೨. ಉತ್ತರ ಕರಾವಳಿ ಕನ್ನಡ – ಈ ಭಾಷೆಯನ್ನು ಹೊನ್ನಾವರ, ಕುಮುಟ, ಶಿರಸಿ, ಸಿದ್ಧಾಪುರ, ಯೆಲ್ಲಾಪುರ, ಕಾರವಾರ, ಭಟ್ಕಳ, ಅಂಕೋಲ, ಪ್ರದೇಶಗಳಲ್ಲಿ ಆಡುತ್ತಾರೆ. ಈ ಭಾಷೆಯ ಕೆಲವು ವೈಶಿಷ್ಟ್ಯಗಳನ್ನು ಹೀಗೆ ಗುರುತಿಸಬಹುದು.

**ದಕ್ಷಿಣ ಕರಾವಳಿ ಕನ್ನಡ:–**

೧. ದಕ್ಷಿಣ ಕರಾವಳಿ ಕನ್ನಡದ ಕೆಲವು ಶಬ್ದಗಳಲ್ಲಿ ಆದಿಯ ಇಕಾರ ಎಕಾರವಾಗಿ ಬದಲಾಗುತ್ತದೆ.

| ಶಿವಳ್ಳಿ ಕನ್ನಡ | ಹವ್ಯಕ ಕನ್ನಡ | ಗೌಡ ಕನ್ನಡ | ಪ್ರಮಾಣ ಭಾಷೆ |
|---|---|---|---|
| ಕೆಮಿ | ಕೆಮಿ | ಕೆಬಿ | ಕಿವಿ |
| ನೆರಿ | ನೆರಿ | ನೆರೆ | ನರಿಗೆ |

೨. ಕೆಲವು ಶಬ್ದಗಳಲ್ಲಿ ಆದಿಯ ಅ ಕಾರವು ವ ಕಾರವಾಗುತ್ತದೆ.

| ಶಿ.ಕ | ಹ.ಕ | ಗೌ.ಕ | ಪ್ರ.ಭಾ |
|---|---|---|---|
| ಆಡು | ವಡು | ವಡು | ಆಡು |
| ಆಮೆ | ವಮೆ | ವಮೆ | ಆಮೆ |

೩. ಕೆಲವು ಶಬ್ದಗಳಲ್ಲಿ ಆದಿಯ ಒ ಕಾರ ಉ ಕಾರವಾಗುತ್ತದೆ.

ಸೊಂಡಿಲು – ಸುಂಡ್ಲು, ಹೊಕ್ಳ – ಹುಕ್ಳ,

೪. ಶಿವಳ್ಳಿ ಕನ್ನಡದಲ್ಲಿ ಅಘೋಷ ವ್ಯಂಜನಗಳು ಘೋಷ ವ್ಯಂಜನಗಳಾಗುತ್ತವೆ. ತಳಿ>ದಾಳಿ, ತುಂಬಿ>ದುಂಬಿ, ಕೆಂಡ>ಗೆಂಡ. ಗೌಡ ಕನ್ನಡದಲ್ಲಿ ಶಬ್ದಗಳ ನಡುವೆ ಅನುನಾಸಿಕ ವ್ಯಂಜನವು ಉಂಟಾಗುತ್ತದೆ. ಬಳಂಕ>ಬಳುಕು, ದಾಂಟು>ದಾಟು, ಜಿಗುಂಟು>ಜಿಗುಟು, ಹವ್ಯಕ ಕನ್ನಡದಲ್ಲಿ ಶಬ್ದಗಳ ಅಂತ್ಯದ ಸ್ಪರ್ಶ ವ್ಯಂಜನ ದ್ವಿತ್ವವಾಗುತ್ತದೆ. ಕೊಳಕು>ಕೊಳಕ್ಕು, ಸೆಳೆತ>ಸೆಳತ್ತ, ಕೆಣಕು>ಕೆಣಕ್ಕು.

೫. ಹವ್ಯಕ ಕನ್ನಡದಲ್ಲಿ ತ ಕಾರ ಚ ಕಾರವಾಗುತ್ತದೆ. ತೆಳು>ಚಳು, ತಂಬಿಗೆ>ಚಂಬು, ತಾಳೆ>ಚಾಳೆ, ಗೌಡಕನ್ನಡದಲ್ಲಿ ಸ ಕಾರ ಚ ಕಾರವಾಗುತ್ತದೆ. ಸಪ್ಪೆ>ಚಪ್ಪೆ, ಸೊಪ್ಪು>ಚೊಪ್ಪು, ಸಂಜೆ>ಚಂಜಿ, ಶಿವಳ್ಳಿ ಮತ್ತು ಗೌಡ ಕನ್ನಡದಲ್ಲಿ 'ಮ' ಕಾರ 'ವ' ಕಾರವಾಗುತ್ತದೆ. ಕೆಮಿ> ಕಿವಿ, ಬಾಮಿ>ಬಾವಿ, ಆಮೆ>ಆವೆ,

**ಉತ್ತರ ಕರಾವಳಿ ಕನ್ನಡ:-**

೧. ಉತ್ತರಕರಾವಳಿ ಕನ್ನಡದಲ್ಲಿ ಹವ್ಯಕ ಕನ್ನಡವನ್ನು ಬಿಟ್ಟು ಉಳಿದ ಕನ್ನಡಗಳಲ್ಲಿ ಶಬ್ದಾಂತ್ಯದ ಎ ಕಾರ ಇ ಕಾರವಾಗುತ್ತದೆ.

ನೆಡೆ-ನೆಡಿ, ವ್ಯಥೆ-ವ್ಯಥಿ, ಕಟ್ಲೆ-ಕಟ್ಲಿ, ಗಂಟೆ-ಗೆಂಟೆ, ಇಲ್ಲಿ-ಎಲ್ಲಿ

೨. ಉತ್ತರ ಕರಾವಳಿಯ ಕನ್ನಡದಲ್ಲಿ ಕೆಲವು ಶಬ್ದಗಳ ಆದಿಯ ಉ ಕಾರ ಒ ಕಾರವಾಗುತ್ತದೆ.

ಕುದ್ರೆ-ಕ್ವೊದ್ರಿ, ಕುಡಿ-ಕ್ವೊಡಿ, ಕುದಿ-ಕ್ವೊದಿ,

೩. ಉತ್ತರ ಕರಾವಳಿಯ ಕನ್ನಡದಲ್ಲಿ ಏಕವಚನಕ್ಕೆ ಪ್ರತ್ಯೇಕ ಪ್ರತ್ಯಯಗಳಿಲ್ಲ. ಆದರೆ ಬಹುವಚನಕ್ಕೆ ಹಲವು ಪ್ರತ್ಯಯಗಳಿವೆ.

ಅಕ್ಕೊ - ತಂದ್ಯಕ್ಕೊ, ತ್ಯಂಗ್ಯಕ್ಕೊ

ಅಕ್ಕೋ - ಮಗಳಕ್ಕೊ, ಎಣ್ ಮಕ್ಕೋ,

ಇಂದಿಕ್ಕೋ - ತಾಯಂದಿಕ್ಕೊ, ತಾಯಂದಿಕ್ಕು. ಇತ್ಯಾದಿ

೪. ಹವ್ಯಕ ಕನ್ನಡ ಹಾಲಕ್ಕಿ ಕನ್ನಡದ ಸರ್ವನಾಮಗಳಲ್ಲಿ ಹೋಲಿಕೆಯಿದೆ. ಮತ್ತು ಅಲ್ಪ ವ್ಯತ್ಯಾಸವೂ ಇದೆ. ಹವ್ಯಕ ಕನ್ನಡದಲ್ಲಿ ಉತ್ತಮ ಪುರುಷ ಏಕವಚನ ಆನು, ಯಾನು, ನಾನು, ನಾ, ಆಗಿದೆ. ಬಹುವಚನ ಯೆಂಗ, ಯೆಂಗೊ, ಯೆಂಗ್ಳು, ನಂಗ, ನಂಗ್ಳೊ, ನಂಗ್ಳು, ನಂಗೋವು ಬಳಕೆಯಲ್ಲಿದೆ.

೫. ಹವ್ಯಕ ಕನ್ನಡದಲ್ಲಿ ಮಧ್ಯಮ ಪುರುಷ ಏಕವಚನ ನೀನು, ನೀ. ಬಹುವಚನ ನಿಂಗೊ, ನಿಂಗ, ನಿಂಗ್ಳು, ನಿಂಗೊವು, ನೀವ್, ನೀವು ಆಗಿದೆ. ಹಾಲಕ್ಕಿ ಕನ್ನಡದಲ್ಲಿ ನೀನು, ನೀ ಏಕವಚನ. ನೀವು, ನೀವ್, ನೀಮು ಬಹುವಚನಗಳಾಗಿವೆ.

## ಸಾಮಾಜಿಕ ಉಪಭಾಷೆಗಳು:-

ಭಾಷೆಯಲ್ಲಿ ಸಾಮಾಜಿಕ ಉಪಭಾಷೆಗಳು ಉಂಟಾಗಲು ಧರ್ಮ, ಜಾತಿ, ಸಂಸ್ಕೃತಿ, ವೃತ್ತಿ, ವರ್ಗ, ಶಿಕ್ಷಣ, ಲಿಂಗ ಮೊದಲಾದ ಸಾಮಾಜಿಕ ಅಂಶಗಳು ಕಾರಣವಾಗುತ್ತವೆ. ಭಾಷೆ ಸಾಮಾಜಿಕ ವ್ಯಕ್ತಿಯ ಆಸ್ತಿ. ಆದ್ದರಿಂದಾಗಿ ವ್ಯಕ್ತಿ ತನ್ನ ಭಾಷೆ, ಸಂಸ್ಕೃತಿಯನ್ನು ಕಾಪಾಡಿಕೊಳ್ಳುವ ಪ್ರಯತ್ನಗಳನ್ನು ಮಾಡುತ್ತಿರುತ್ತಾನೆ. ಆ ಭಾಷೆ ಒಂದು ಆ

ವರ್ಗದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತಿರುತ್ತದೆ. ಅಲ್ಲದೆ ಆ ಭಾಷೆಯ ಮೇಲೆ ಆ ವರ್ಗದ ವೃತ್ತಿಯ ಪ್ರಭಾವವನ್ನು ಕಾಣಬಹುದು.

**ಕೊರಗ ಕನ್ನಡ**:

ಕೊರಗರು ಮಾತನಾಡುವ ಕನ್ನಡವೇ ಕೊರಗ ಕನ್ನಡ. ಇದು ಕನ್ನಡದ ಒಂದು ಸಾಮಾಜಿಕ ಉಪಭಾಷೆಯಾಗಿದೆ. ಈ ಜನಾಂಗಕ್ಕೆ ತನ್ನದೇ ಆದ ಆಚಾರ, ಸಂಪ್ರದಾಯ, ವಿವಾಹ ಪದ್ದತಿ, ಆಡಳಿತ, ನ್ಯಾಯ ಪದ್ಧತಿಗಳಿವೆ. ಇದಲ್ಲದೆ ತಮ್ಮದೇ ಆದ ಭಾಷೆಯನ್ನು ಹೊಂದಿದೆ. ಕೊರಗ ಭಾಷೆಯ ಮೇಲೆ ತುಳು ಭಾಷೆಯ ಪ್ರಭಾವವನ್ನು ಕಾಣಬಹುದಾಗಿದೆ. ಈ ಭಾಷೆಯ ಕೆಲವು ವೈಶಿಷ್ಟ್ಯವನ್ನು ಕೆಳಕಂಡಂತೆ ಗುರುತಿಸಬಹುದಾಗಿದೆ.

೧.ಈ ಉಪಭಾಷೆಯಲ್ಲಿ ಒಂಟಿಕೊರಗ ಮೂಡುಕೊರಗ ತಪ್ಪುಕೊರಗಯೆಂಬ ಉಪ ವರ್ಗಗಳು ಇದ್ದು ಇವುಗಳಲ್ಲಿಯೇ ಭಾಷಾ ವ್ಯತ್ಯಾಸವನ್ನು ಕಾಣಬಹುದು. ಈ ಭಾಷೆಯಲ್ಲಿ ಮೂಲ ದ್ರಾವಿಡದ ರಳ ಕಾರವು ಮೂಡು ಕೊರಗರಲ್ಲಿ 'ಳ' ಕಾರವಾಗಿಯೂ, ಒಂಟಿ ಕೊರಗ ಮತ್ತು ತಪ್ಪು ಕೊರಗರಲ್ಲಿ ರ ಕಾರವಾಗಿದೆ.

| | ಒಂಟಿಕೊರಗ | ಮೂಡುಕೊರಗ | ತಪ್ಪುಕೊರಗ |
|---|---|---|---|
| ಹುಳ | ಪುರಿ | ಹುಳ | ಹುರಿ |
| ಬೀಳ | ಬೂರು | ಬೂಳು | ಬೂರು |

೨. ತಪ್ಪು ಕೊರಗದಲ್ಲಿ ಬಳಕೆಯಲ್ಲಿ ಹಲವು ಪದಗಳು ತುಳುವಿನಿಂದ ಪ್ರಭಾವಿತಗೊಂಡಿದೆ. ಹಾಗೂ ಹ್ ಕಾರ ಧ್ವನಿ ಪರಿವರ್ತನೆ ಇದೆ.

| | ತಪ್ಪುಕೊರಗ | ತುಳು |
|---|---|---|
| ಹಸಿ | ಹಜಿ | ಪಜಿ |
| ಹರುವೆ | ಹದ್ದೆ | ಪದ್ದೆ |

೩. ಇವರು ಕಾಡಿನಲ್ಲಿ ವಾಸಿಸುವ ಜನರಾದ್ದರಿಂದ ತಮ್ಮ ಮಕ್ಕಳಿಗೆ ಹೆಸರಿಡುವಾಗ ಕ್ರಿಮಿಕೀಟ, ಪ್ರಾಣಿಪಕ್ಷಿಗಳ ಹೆಸರನ್ನು ಇಡುವುದು ವಿಶೇಷವಾಗಿದೆ. ನಕ್ಕುರ [ಎರೆಹುಳ], ಬೆಜಕ್ಕರ[ತರಗೆಲೆ], ತಬುರ [ಕೆಂಪು ಇರುವೆ], ಬಳುಂಬ [ಮೀನು], ಮೆಣ್ಕ [ಮಿಂಚುಹುಳ], ಪಿಜಿನ [ಇರುವೆ], ಬೊಗ್ಗುರ [ಗಂಡುನಾಯಿ]

೪. ಇದರ ಜೊತೆಗೆ ಇವರು ಹೆಸರಿಡುವಾಗ ಆ ಮಗು ಹುಟ್ಟಿದ ವಾರದ ಹೆಸರುಗಳನ್ನು ಅದಕ್ಕೆ ಇಡುತ್ತಾರೆ.

| ವಾರ | ಗಂಡು | ಹೆಣ್ಣು |
|---|---|---|
| ಆದಿತ್ಯವಾರ | ಐತ | ಐತು |
| ಸೋಮವಾರ | ಚೋಮ | ಚೋಮು |
| ಮಂಗಳವಾರ | ಅಂಗಾರ | ಅಂಗಾರೆ |
| ಬುಧವಾರ | ಬೂದ | ಬೂದು |
| ಗುರುವಾರ | ಗುರುವ | ಗುರುವಿ |
| ಶುಕ್ರವಾರ | ತುಕ್ರ | ತುಕ್ರಿ |
| ಶನಿವಾರ | ತನಿಯ | ತನಿಯಾರು |

**ಗೊಂಡ ಕನ್ನಡ:**

ಗೊಂಡ ಜನಾಂಗದವರು ಕೇವಲ ಕರ್ನಾಟಕದಲ್ಲಿ ಅಷ್ಟೇ ಅಲ್ಲದೆ ಭಾರತದ ಅನೇಕ ಪ್ರದೇಶಗಳಲ್ಲಿ ವಾಸಿಸುವುದನ್ನು ಕಾಣಬಹುದು. ಕರ್ನಾಟಕದಲ್ಲಿ ಗುಲ್ಬರ್ಗ, ಬೀದರ್ ಮತ್ತು ಉತ್ತರ ಕರ್ನಾಟಕದ ಹಲವು ಪ್ರದೇಶಗಳಲ್ಲಿ ನೆಲೆಸಿರುವುದನ್ನು ಕಾಣಬಹುದು. ಈ ಭಾಷೆಯಲ್ಲಿಯೂ ಅನೇಕ ವೈಶಿಷ್ಟ್ಯಗಳನ್ನು ಗುರುತಿಸಬಹುದಾಗಿದೆ.

೧. ಗೊಂಡ ಕನ್ನಡದಲ್ಲಿ ಒ ಕಾರ ಆದಿಯಾದ ಕೆಲ ಶಬ್ದಗಳು ವ ಕಾರವಾಗುತ್ತವೆ.

ಒಂದಲ್ಲಾ–ವಂದಲಾ,, ಒನಕೆ–ವನಕಿ

ಒಟ್–ವಟ್, ಒಟ್ಟಾಗಿ–ವಟ್ಟಾಗಿ

೨. ಕೆಲವು ಶಬ್ದಗಳು ಅನುಸ್ವಾರವನ್ನು ಪಡೆಯುತ್ತವೆ.

ಅವ–ಅಂವ ಇವ–ಇಂವಾ

ಹಾಗೇ–ಹಾಂಗೇ ತನಗೆ–ತಂಗೆ

೩. ಕೆಲವು ಶಬ್ದಗಳಲ್ಲಿ ಐ ಸ್ವರದ ಬದಲು ಅಯ್ ಬಳಕೆಯಾಗುತ್ತದೆ.

ಮೈದ್ನ–ಮಯ್ದೀನಾ ಬೈದಾನೆ–ಬಯದಾನೆ

ಬೈತಾಳ–ಬಯತಾಳ ಕೈಯಲ್ಲಿ–ಕಯ್ಲ್ಲ್, ಕಯ್ಲಿ

೪. ಕೆಲವು ಶಬ್ದಗಳ ಪದಾಂತ್ಯವು ಅಂಬ್ರ ಎಂಬ ರೂಪವನ್ನು ಪಡೆಯುತ್ತವೆ.
ಸತ್ತಂಬ್ರಲ್ಲಿ, ಆಯ್ತಂಬ್ರು, ಹೋದ್ನಂಬ್ರು, ಅಂತಂಬ್ರು, ಹೋತರಂಬ್ರು, ಕೇಳ್ರಂಬ್ರು

೫. ಕೆಲವು ಶಬ್ದಗಳು ಉ ಸ್ವರಾಂತ್ಯಕ್ಕೆ ಬದಲಾಗಿ ಆ ಕಾರಾಂತವಾಗುತ್ತವೆ.

ಹಿಡಿದು–ಹಿಡ್ದಾ ಏರ್ಕಂಡು–ಏರ್ಕಂಡಾ

೬. ಗೊಂಡ ಕನ್ನಡದಲ್ಲಿ ಒ ಕಾರ ಆದಿಯಾದ ಕೆಲ ಶಬ್ದಗಳು ವ ಕಾರವಾಗುತ್ತವೆ.

ಒಂದಲ್ಲಾ–ವಂದಲ್ಲಾ ಒನಕೆ–ವನಕಿ

೭. ಕೆಲವು ಶಬ್ದಗಳು ಉ ಸ್ವರಾಂತ್ಯಕ್ಕೆ ಬದಲಾಗಿ ಆ ಕಾರಾಂತವಾಗುತ್ತವೆ.

ಹಿಡಿದು–ಹಿಡ್ದಾ ಏರ್ಕಂಡು–ಏರ್ಕಂಡಾ

**ಜೇನು ಕುರುಬ ಕನ್ನಡ:–**

ಮೈಸೂರು ಪ್ರಾದೇಶಿಕ ಉಪಭಾಷೆಯಲ್ಲಿ ಈ ಸಾಮಾಜಿಕ ಉಪಭಾಷೆಯನ್ನು ಕಾಣಬಹುದಾಗಿದೆ. ಮೈಸೂರು ಜಿಲ್ಲೆಯ ಹುಣಸೂರು, ಹೆಗ್ಗಡದೇವನ ಕೋಟೆ, ಮಡಿಕೇರಿ, ಕುಶಾಲ ನಗರ, ಸೋಮವಾರಪೇಟೆ ಮುಂತಾದ ಕಡೆಗಳಲ್ಲಿ ಈ ಸಾಮಾಜಿಕ ಉಪಭಾಷೆಯನ್ನು ಕಾಣಬಹುದಾಗಿದೆ. ಈ ಭಾಷೆಯೂ ಕೂಡ ತನ್ನದೇ ಆದ ಕೆಲವು ಭಾಷಾ ವೈಶಿಷ್ಟ್ಯವನ್ನು ಹೊಂದಿದೆ.

೧. ಜೇನು ಕುರುಬ ಕನ್ನಡದಲ್ಲಿ ಕೆಲವು ಶಬ್ದಗಳ ಹ ಕಾರವು ಲೋಪವಾಗಿ ಅ, ಓ, ಎ ಕಾರಾದಿಯಾಗಿ ಬದಲಾಗುತ್ತದೆ.

ಹೇಳಿದಾಗ–ಅಳಿದಾಗ, ಹೇಳಿದ–ಅಳಿದ,

ಹಸಿರು–ಅಸಿರು, ಹನ್ನೆರಡು–ಅನ್ನೇಡು,

೨. ಕೆಲವು ಶಬ್ದಗಳಲ್ಲಿ ಶ ಕಾರ ಸ ಕಾರವಾಗುತ್ತದೆ.

ಶಿವ–ಸಿವ, ಆಕಾಶ–ಆಕಾಸ,

ವರ್ಷ–ವರ್ಸ, ದೇಶ–ದೇಸ

೩. ಕೆಲವು ಶಬ್ದಗಳಲ್ಲಿ ಒತ್ತಕ್ಷರ ಲೋಪವಾಗುತ್ತದೆ.

ಆಯ್ತು–ಆತು, ಮರದಲ್ಲಿ–ಮರಾಲೆ,

ಕೊಳದಲ್ಲಿ–ಕೊಳಾಲೆ, ಮರಕ್ಕೆ–ಮರಗು

೪. ಜೇನು ಕುರುಬ ಕನ್ನಡದಲ್ಲಿ ಪ್ರಥಮ ಪುರುಷ ಸರ್ವನಾಮದಲ್ಲಿ ಪುಲ್ಲಿಂಗ ಸರ್ವನಾಮಗಳಿವೆ.

ಅಂವ, ಇವ, ಇಬಾ, ಇವಾನೆ. ಸ್ತ್ರೀಲಿಂಗ ಸರ್ವನಾಮಗಳು ಇವಳ, ಅವಳ, ಆಳ ಆಗಿದೆ. ಬಹುವಚನದಲ್ಲಿ ನಪುಂಸಕಲಿಂಗವೆ ಬಳಕೆಯಾಗುತ್ತದೆ.

೫. ಸಪ್ತಮಿ ವಿಭಕ್ತಿ ಪ್ರತ್ಯಯ ಅಲ್ಲಿ ಎಂಬುದಕ್ಕೆ ಬದಲಿಗೆ ಆಲೆ ಎಂಬ ಪ್ರತ್ಯಯ ಬರುತ್ತದೆ.

'ಇಬ ಬಂದು ಆಲು ಕೊಳದಾಲೆ ತಾನೆ ನೀರು ಮೀಯಾದು'

೬. ಕೆಲವು ಶಬ್ದಗಳಲ್ಲಿ ಇ ಕಾರ ಉ ಕಾರವಾಗಿ ಬದಲಾಗುತ್ತದೆ

ಬಿಟ್ಟೆ-ಬುಟ್ಟು, ಕಟ್ಟಿ-ಕಟ್ಟು, ಬಿಡು-ಬುಡು

## ಹೊಸಗನ್ನಡ ಛಂದಸ್ಸಿನ ಪ್ರಕಾರಗಳು:-

ಕ್ರಿಶ ೭ನೇ ಶತಮಾನದಿಂದ ೧೮ನೇ ಶತಮಾನದವರೆಗೆ ಕನ್ನಡ ಸಾಹಿತ್ಯದ ಮೇಲೆ ಸಂಸ್ಕೃತ ಭಾಷೆ ಮತ್ತು ಅದರ ಛಂದಸ್ಸಿನ ಪ್ರಭಾವ ಸಾಕಷ್ಟಿರುವುದನ್ನು ಕಾಣಬಹುದು. ಸಂಸ್ಕೃತದ ಪ್ರಭಾವದಿಂದ ಕನ್ನಡ ಮುಕ್ತವಾಗಲು ಸಾವಿರಾರು ವರ್ಷಗಳೇ ಸಂಧಿವೆ. ಆದರೆ ಬ್ರಿಟಿಷರ ಮತ್ತು ಕ್ರೈಸ್ತ ಮಿಷನರಿಗಳ ಪ್ರವೇಶದಿಂದ ಮತ್ತೆ ಕನ್ನಡ ಸಾಹಿತ್ಯದ ಮೇಲೆ ಸಾಕಷ್ಟು ಪರಿಣಾಮ ಉಂಟಾಯಿತು. ಇದರಿಂದ ಕನ್ನಡ ಸಾಹಿತ್ಯದಲ್ಲಿ ಹಲವಾರು ರೀತಿಯ ಛಂದಸ್ಸಿನ ಸಾಹಿತ್ಯ ಪ್ರಕಾರಗಳು ಹುಟ್ಟಿಕೊಂಡವು. ಅವುಗಳೆಂದರೆ ಸರಳ ರಗಳೆ, ಸಾನೆಟ್(ಸುನೀತ), ಪ್ರಗಾಥ. ಸ್ವಚ್ಛಂದ ಛಂದಸ್ಸು(ಮುಕ್ತ ಛಂದಸ್ಸು).

ಕುವೆಂಪುರವರ ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯದಲ್ಲಿ ಕಾಣಿಸುವಂತಹ ವಿಶಿಷ್ಟವಾದ ಛಂದಸ್ಸಿನ ಪ್ರಕಾರವೇ ಸರಳ ರಗಳೆ. ಇದನ್ನೆ ಮಹಾಛಂದಸ್ಸು ಎಂದು ಕರೆಯಲಾಗಿದೆ. ಪ್ರಾಸವಿಲ್ಲದ ರಗಳೆಗೆ ಸರಳ ರಗಳೆ ಎಂದು ಕರೆಯುತ್ತಾರೆ. ರಗಳೆ ಮೂಲತಃ ಕನ್ನಡದ್ದೆ. ಆದರೆ ಆದಿ ಮತ್ತು ಅಂತ್ಯಪ್ರಾಸವನ್ನು ತೊರೆದರೆ ಸರಳ ರಗಳೆಯಾಗುತ್ತದೆ. ಇಂಗ್ಲೀಷಿನ "ಬ್ಲ್ಯಾಂಕ್ ವರ್ಸ್"ನ ಪ್ರಭಾವದಿದಂದ ಕನ್ನಡದಲ್ಲಿ ಈ ಪ್ರಕಾರ ಬಂದಿದೆ. ಇದರ ಜೊತೆಗೆ ಲಲಿತ ರಗಳೆಯ ಆಧಾರದ ಮೇಲೆ ನೆಲೆನಿಂತ ಛಂದೋಬಂಧ. ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರು ಈ ಛಂದಸ್ಸಿನ ಮೊದಲ ಹರಿಕಾರರು.

ಕನ್ನಡಕ್ಕೆ ಸಾನೆಟ್ ಇಂಗ್ಲಿಷ್ ಕಾವ್ಯದ ಪ್ರಭಾವದಿಂದ ಬಂದಿದೆ. ಬೇಂದ್ರೆ ಮತ್ತು ಮಾಸ್ತಿಯವರು ಇದಕ್ಕೆ 'ಅಷ್ಟಷಟ್ಪದಿ' ಎಂದು ಕರೆದಿದ್ದಾರೆ. ಮತ್ತೆ ಕೆಲವರು ಸುನೀತವೆಂದು ಕರೆದಿದ್ದಾರೆ. ಇದರ ಮುಖ್ಯ ಲಕ್ಷಣ ೧೪ ಪಂಕ್ತಿಗಳಿರುವುದು. ಇದನ್ನು

ಎರಡು ಭಾಗವಾಗಿ ವಿಂಗಡಿಸಬಹುದು. ಮೊದಲ ೮ ಸಾಲು ಒಕ್ಟೆವ್, ನಂತರದ ೮ ಸಾಲು ಸೆಸ್ಟೆವ್. ಮೊದಲನೆಯ ಭಾಗದಲ್ಲಿ ಸಂಗತಿಯನ್ನು, ಎರಡನೆಯ ಭಾಗದಲ್ಲಿ ಅದರಿಂದ ಮೂಡುವ ಭಾವವನ್ನು ವಿವರಿಸಬೇಕು. ಎಂಟು ಸಾಲಿನಲ್ಲಿ ನಾಲ್ಕು ಸಾಲಿನ ಎರಡು ನುಡಿಗಳು ಇರಬಹುದು ಮತ್ತು ಎರಡೇ ಪ್ರಾಸಗಳು ಇರಬೇಕು. ಕೊನೆಯ ೮ ಸಾಲಿನಲ್ಲಿ ಎರಡು ನುಡಿಗಳು ಇರಬಹುದು. ಇಲ್ಲಿ ೨ ಅಥವಾ ೩ ಪ್ರಾಸಗಳು ಬರುತ್ತದೆ. ಆದರೆ ಹಿಂದಿನ ಎರಡು ಪ್ರಾಸಗಳಿಗೆ ಹೋಲಬಾರದು. ಮೊದಲ ನಾಲ್ಕು ಸಾಲುಗಳು ಕವಿಯ ವಿಚಾರವನ್ನೋ, ಮನಃ ಸ್ಥಿತಿಯನ್ನೋ ಸೂಚಿಸುತ್ತವೆ. ಕನ್ನಡದಲ್ಲಿ ಮೊದಲು ಸಾನೆಟ್‌ನ್ನು ರಚಿಸಿದವರು ಗೋವಿಂದಪೈಯವರು.

ಇಂಗ್ಲಿಷ್‌ನ "ಖ್ಙಜ ಠಜಜ" ಎಂಬ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಪ್ರಗಾಥ ಎಂಬ ಪದವನ್ನು ಬಳಸುತ್ತೇವೆ. ಇದು ಭಾವಗೀತೆಯ ಒಂದು ರೂಪ. 'ಓಡ್' ಪದವು ಗ್ರೀಕ್ ಪದವಾಗಿದ್ದು ಪ್ರಾಸವುಳ್ಳ ಗೀತೆಯಾಗಿದೆ. ಗಂಭೀರವಾದ ಮತ್ತು ಘನವಾದ ಶೈಲಿಯಲ್ಲಿದ್ದು ಬದಲಾಯಿಸುವ ಅನಿಯತ ಛಂದಸ್ಸಿನಲ್ಲಿದೆ. ಸಾಮಾನ್ಯವಾಗಿ ೫೦ ರಿಂದ ೨೦೦ ಸಾಲುಗಳಷ್ಟಿರುತ್ತವೆ.

ಇಂಗ್ಲಿಷ್‌ನ 'ಫಿವರ್ಸ' ಎಂಬ ಶಬ್ದವೇ ಕನ್ನಡದಲ್ಲಿ ಸ್ವಚ್ಛಂದ ಛಂದಸ್ಸು ಅಥವಾ ಮುಕ್ತ ಛಂದಸ್ಸು. ಇದು ಬಿಂದು ವಿಶಿಷ್ಟವಾದ ಛಂದೋರೂಪ. ಈ ಪ್ರಕಾರದಲ್ಲಿ ಮೊದಲು ವಿ.ಕೃ.ಗೋಕಾಕರು ಕಾವ್ಯ ರಚಿಸಿದರು. ಇದರ ವೈಶಿಷ್ಟ್ಯವೆಂದರೆ ಅಗತ್ಯಕ್ಕೆ ತಕ್ಕಂತೆ ಪಾದಗಳು ಹಿಗ್ಗುತ್ತಾ-ಕುಗ್ಗುತ್ತಾ ಹೋಗುತ್ತವೆ. ಪದ್ಯದ ಪಾದಗಳು ಲಯಬದ್ಧತೆಯಿಂದ ಹಾಗೂ ವಿಶಿಷ್ಟತೆಯಿಂದ ಮೆರಗು ಪಡೆದಿರುತ್ತವೆ. ಇದರ ಜೊತೆಗೆ ನವ್ಯ ಸಾಹಿತ್ಯದ ಮೇಲೂ ಇಂಗ್ಲಿಷ್‌ನ ಪ್ರಭಾವವಿದ್ದುದರಿಂದ ಆ ಸಾಹಿತ್ಯದ ಪ್ರಕಾರದಲ್ಲೂ ಹೊಸ ಲಕ್ಷಣಗಳನ್ನು ಕಾಣಬಹುದು.

# ಪರಿಸಮಾಪ್ತಿ

ಕನ್ನಡ ಭಾಷೆಯ ಸಾಹಿತ್ಯ ವಿಶ್ವ ಸಾಹಿತ್ಯದಲ್ಲಿ ಬಹಳ ಮಹತ್ವಪೂರ್ಣವಾದ ಸ್ಥಾನವನ್ನು ಪಡೆದಿದೆ. ಕನ್ನಡ ಭಾಷೆಯ ಹಲವು ಕೃತಿಗಳು ಅಂತರ್ ರಾಷ್ಟ್ರೀಯ ಭಾಷೆಗಳಿಗೆ ತರ್ಜುಮೆಯಾಗುತ್ತಿವೆ. ಇದರ ಜೊತೆಗೆ ಭಾರತದಲ್ಲಿ ಸಾಹಿತ್ಯಕ್ಕೆ ನೀಡುವ ಶ್ರೇಷ್ಠ ಪ್ರಶಸ್ತಿಯಾದ ಜ್ಞಾನಪೀಠ ಪ್ರಶಸ್ತಿಯನ್ನು ಅತೀ ಹೆಚ್ಚು ಪಡೆದ ಭಾಷೆ ಕನ್ನಡವಾಗಿದೆ. ಅಲ್ಲದೆ ಭಾರತದ ಪ್ರಾಚೀನ ಭಾಷೆಗಳಲ್ಲಿ ಇದು ಪ್ರಮುಖವಾದುದಾಗಿದ್ದು ಸಾವಿರಾರು ವರ್ಷಗಳ ಇತಿಹಾಸವಿದೆ. ಸಿಂಧೂ ನಾಗರೀಕತೆಯ ಪ್ರಾಚೀನತೆಯವರೆಗೂ ಈ ಭಾಷೆಯ ಪ್ರಾಚೀನತೆಯನ್ನು ಹುಡುಕುವ ಅಧ್ಯಯನ ನಡೆದಿದೆ.

ಭಾಷೆಯ ಅಧ್ಯಯನದಲ್ಲಿ ಒಂದು ಭಾಷೆಯ ಪ್ರಾಚೀನತೆಯನ್ನು ಗುರುತಿಸುವುದು ಅದರಲ್ಲಿ ದೊರೆತಿರುವ ಸಾಹಿತ್ಯಾಧಾರಗಳಿಂದ. ಕನ್ನಡ ಭಾಷೆಯಲ್ಲಿ ಖಚಿತವಾದ ಸಾಹಿತ್ಯ ದೊರೆತಿರುವುದು ೯ನೇ ಶತಮಾನದಲ್ಲಿ. ಅದಕ್ಕೂ ಪೂರ್ವದಲ್ಲಿ ದೊರೆತಿರುವುದೆಲ್ಲ ಶಾಸನಗಳಲ್ಲಿನ ಭಾಷೆ. ಕನ್ನಡದಲ್ಲಿ ದೊರೆತ ಮೊದಲ ಶಾಸನವೆಂದರೆ ಕ್ರಿಶ ೪೫೦ರಲ್ಲಿ ದೊರೆತ ಹಲ್ಮಿಡಿ ಶಾಸನ. ಆದರೆ ಇದು ಸಂಪೂರ್ಣವಾಗಿ ಕನ್ನಡದಲ್ಲಿರದೆ ಸಂಸ್ಕೃತ ಮತ್ತು ಪ್ರಾಕೃತದಿಂದ ಕೂಡಿದೆ. ಇದರ ಜೊತೆಗೆ ಐಹೊಳೆ ಶಾಸನ, ಶ್ರವಣಬೆಳುಗೊಳ ಶಾಸನ, ಬಾದಾಮಿ ಶಾಸನ ಇನ್ನು ಮುಂತಾದ ಶಾಸನಗಳು ದೊರೆತಿದ್ದು, ಇವು ಕನ್ನಡದ ಶೈಶವಾವಸ್ಥೆಯ ಲಕ್ಷಣವನ್ನು ತಿಳಿಸುತ್ತವೆ. ಪೂರ್ವದ ಹಳಗನ್ನಡದಲ್ಲಿ ಸಾಹಿತ್ಯ ರಚನೆಯಾಗಿರುವ ಸಾಧ್ಯತೆಗಳು ಇವೆ. ಕಾರಣ ಕನ್ನಡದಲ್ಲಿ ದೊರೆತಿರುವ ಮೊದಲ ಗ್ರಂಥವಾದ ಕವಿರಾಜಮಾರ್ಗವು ಸಾಹಿತ್ಯ ಕೃತಿಯಲ್ಲ. ಅದು ಒಂದು ಲಕ್ಷಣ ಗ್ರಂಥವಾಗಿದೆ. ಒಂದು ಭಾಷೆಯಲ್ಲಿ ಸಾಹಿತ್ಯದ ಲಕ್ಷಣ ಮತ್ತು ವ್ಯಾಕರಣಕ್ಕೆ ಸಂಬಂಧಿಸಿದಂತೆ ಗ್ರಂಥ ರಚನೆಯಾಗಬೇಕಾದರೆ ಆ ಭಾಷೆ ಮತ್ತು ಆ ಭಾಷೆಯ ಸಾಹಿತ್ಯ ಸಾಕಷ್ಟು ಬೆಳವಣಿಗೆಯನ್ನು ಹೋದಿರಲೇಬೇಕು. ಈ ಹಿನ್ನಲೆಯಲ್ಲಿ ಕನ್ನಡ ಭಾಷೆಯ ಸಾಹಿತ್ಯ ಕುರಿತಾದ ಸಂಶೋಧನೆ ಮತ್ತು ಅಧ್ಯಯನ ಸಾಕಷ್ಟು ನಡೆಯಬೇಕಾಗಿದೆ.

ಭಾಷೆಯ ಅಧ್ಯಯನದ ದೃಷ್ಟಿಯಿಂದ ದೊರೆತಿರುವ ಶಾಸನಗಳು ಮತ್ತು ಸಾಹಿತ್ಯಾಧಾರಗಳನ್ನು ಆಧಾರವಾಗಿರಿಸಿಕೊಂಡು ಕನ್ನಡ ಭಾಷೆಯ ಕಾಲವನ್ನು ನಾಲ್ಕು ಘಟ್ಟಗಳಲ್ಲಿ ವಿಭಾಗಿಸಬಹುದಾಗಿದೆ. ಆದರೆ ಈ ವಿಷಯ ಕುರಿತಾಗಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಬಿ.ಎಲ್.ರೈಸ್‌ರವರು ಪೂರ್ವದ ಹಳಗನ್ನಡ, ಹಳಗನ್ನಡ, ಹೊಸಗನ್ನಡವೆಂದು ಹೇಳಿ ನಡುಗನ್ನಡವನ್ನು ಕೈಬಿಟ್ಟಿದ್ದರೆ ಕಿಟೆಲ್‌ರವರು ಪೂರ್ವದ ಹಳಗನ್ನಡವನ್ನು ಹೇಳದೆ ನಡುಗನ್ನಡ ಕಾಲವನ್ನು ಹೆಸರಿಸಿದ್ದಾರೆ. ಬಿ.ಎಂ.ಶ್ರೀ ಮತ್ತು ಟಿ.ಎಸ್.ವೆಂಕಣ್ಣಯ್ಯ ಅವರು ಈ ನಾಲ್ಕು ಕಾಲಘಟ್ಟವನ್ನು ಹೆಸರಿಸಿದ್ದಾರೆ. ಆರ್.ರಘುನಾಥ್ ಅವರು ಕೇಶಿರಾಜ ಮತ್ತು ನಾಗವರ್ಮ ಹೇಳಿದ ದಕ್ಷಿಣೋತ್ತರ ಮಾರ್ಗದ ರೀತಿಯಲ್ಲಿಯೇ ಕಾಲಘಟ್ಟವನ್ನು ವಿವರಿಸಿದ್ದಾರೆ.

ದೊರೆತಿರುವ ಆಧಾರಗಳನ್ನು ಗಮನಿಸಿದಾಗ ನಾಲ್ಕು ಕಾಲಘಟ್ಟಗಳಲ್ಲಿ ಕನ್ನಡ ಭಾಷೆಯನ್ನು ವಿಭಾಗಿಸಬಹುದಾಗಿದೆ. ಒಂದು ಕಾಲಘಟ್ಟದಿಂದ ಮತ್ತೊಂದು ಕಾಲಘಟ್ಟದ ಭಾಷೆಯಲ್ಲಿ ಸಾಕಷ್ಟು ಬಲಾವಣೆಯನ್ನು ಕಾಣಬಹುದಾಗಿದೆ. ಪೂರ್ವದ ಹಳಗನ್ನಡದಲ್ಲಿ ಕಂಡುಬರುವ ಭಾಷೆ ಹಳಗನ್ನಡದಲ್ಲಿ ಬದಲಾಗಿದೆ. ಪೂರ್ವದ ಹ.ದಲ್ಲಿ ಅಖ್ಯಾತ ಪ್ರತ್ಯಯಗಳಾದ ಆನ್, ಓರ್, ದ್ವಿತೀಯ ವಿಭಕ್ತಿ ಪ್ರತ್ಯಯವಾದ ಆನ್, ಷಷ್ಠಿ ವಿಭಕ್ತಿ ಪ್ರತ್ಯಯವಾದ ಆ ಗಳು ದೀರ್ಘವಾಗಿದ್ದರೆ, ಹಳಗನ್ನಡದಲ್ಲಿ ಅನ್, ಅರ್, ಅನ್, ಅ ಎಂದು ಹ್ರಸ್ವಸ್ವರಗಳಾಗಿವೆ. ಪೂರ್ವದ ಹ.ದಲ್ಲಿನ ವಕಾರ ಹಳಗನ್ನಡದಲ್ಲಿ ಬಕಾರವಾಗಿದೆ. ಪೂರ್ವದ ಹ.ದಲ್ಲಿ ನಕಾರವಿದ್ದರೆ ಹಳಗನ್ನಡದಲ್ಲಿ ಬಿಂದು ಪ್ರಯೋಗವಾಗಿದೆ. ಪೂರ್ವದ ಹ.ದಲ್ಲಿನ ಗುಣವಾಚಕ, ನಿಷೇದಾರ್ಥಕ ಕ್ರಿಯಾಪದ ದೀರ್ಘವಾಗಿದ್ದರೆ ಹಳಗನ್ನಡದಲ್ಲಿ ಹ್ರಸ್ವವಾಗಿರುವುದನ್ನು ಕಾಣಬಹುದಾಗಿದೆ. ಪೂರ್ವದ ಹ.ದಲ್ಲಿ ದ್ವಿತೀಯಾ ವಿಭಕ್ತಿ ಪ್ರತ್ಯಯ ಮತ್ತು ಷಷ್ಠೀ ವಿಭಕ್ತಿ ಪ್ರತ್ಯಯಗಳ ಸ್ವರ ದೀರ್ಘವಾಗಿದ್ದರೆ ಹಳಗನ್ನಡದಲ್ಲಿ ಹ್ರಸ್ವವಾಗಿದೆ.(ಆನ್–ಅನ್). ಪೂರ್ವದ ಹ.ದಲ್ಲಿ ಱ(ರ),ೞ(ಳ)ಕಾರಗಳು ಯಾವ ಬದಲಾವಣೆಯನ್ನು ಹೊಂದದೆ ಮೂಲದಂತೆಯೇ ಬಳಕೆಯಲ್ಲಿದ್ದವು. ಇವುಗಳ ಉಚ್ಚಾರ ಒಂಭತ್ತನೆಯ ಶತಮಾನದ ಹೊತ್ತಿಗೆ ಸ್ವಲ್ಪ ಬದಲಾವಣೆಯಾಗಲು ಆರಂಭಿಸಿರುವುದನ್ನು ಕಾಣಬಹುದು.(ಅಱಿ–ಅರಿ, ಕಱೆ–ಕರೆ) ಪೂರ್ವದ ಹಳಗನ್ನಡದಲ್ಲಿ ದ್ವಿತ್ವದ ಬಳಕೆ ಹೆಚ್ಚಾಗಿದೆ. (ತಳೆಕ್ಕಾಡು, ಸ್ವರ್ಗ್ಗ, ಪಾರ್ವ್ವರುಂ).

ಪೂರ್ವದ ಹ.ದಲ್ಲಿನ ಸಮಾವೇಶಕ ಮತ್ತು ಅಸಮಾವೇಶಕ ರೂಪಗಳು ಹಳಗನ್ನಡದಲ್ಲಯೂ ಸಮಾನವಾಗಿ ಬಳಕೆಯಾಗಿದೆ. ಪೂರ್ವದ ಹ.ದಲ್ಲಿ ಪೂರ್ಣಕ್ರಿಯಾಪದಗಳಲ್ಲಿ ಕಾಲ, ಲಿಂಗ, ವಚನ ವಿವಕ್ಷೆ ಇಲ್ಲದ ರೂಪಗಳು ಹೆಚ್ಚು ಬಳಕೆಯಲ್ಲಿವೆ. ಇವು ಕ್ರಿಯಾಧಾತುಗಳಿಗೆ –ಕುಂ ಇಲ್ಲವೆ ಗುಂ ಎಂಬ ಪ್ರತ್ಯಯಗಳೊಡನೆ ಸೇರುತ್ತದೆ.(ಇರ್ಕುಂ, ಅರ್ಕುಂ, ಬಗೆಗುಂ). ಪೂರ್ವದ ಹ.ದಲ್ಲಿದ್ದ ಪಕಾರ ಹಳಗನ್ನಡದಲ್ಲಿ ಹಕಾರವಾಗುತ್ತದೆ. ಪೂರ್ವದ ಹ.ದಲ್ಲಿ ತಮಿಳಿನ ಛಾಯೆ ಕಂಡುಬರುತ್ತದೆ. ನರಗ, ವೈಕೊಸ್ತ, ನಾಯಗನ್ ಹೀಗೆ ಹಲವಾರು ತಮಿಳಿನ ಪದಗಳು ಕಾಣಸಿಗುತ್ತವೆ. ಆದರೆ ಹಳಗನ್ನಡದಲ್ಲಿ ತಮಿಳಿನ ಪ್ರಭಾವ ಸಂಪೂರ್ಣವಾಗಿ ಕಣ್ಮರೆಯಾಗಿದೆ. ಹಳಗನ್ನಡದಲ್ಲಿ ಒಂದು ಸರ್ವನಾಮ ಮತ್ತು ನಾಮಪದ ಸೇರಿ ಕ್ರಿಯಾಪದವಿಲ್ಲದೆಯೇ ವಾಕ್ಯವಾಗುತ್ತದೆ.(ಇದು ಕೈಲಾಸ, ಇದು ಚಕ್ರವ್ಯೂಹ). ಹಳಗನ್ನಡದಲ್ಲಿ ವಿಜಾತೀಯ ದ್ವಿತ್ವಗಳಿಂದ ಕೂಡಿದ ಪದಗಳ ದ್ವಿತ್ವ ನಡುಗನ್ನಡದಲ್ಲಿ ಲೋಪವಾಗುತ್ತದೆ.(ನಾಞ್ಚು–ನಾಚು, ಸೋಲ್ತು–ಸೋತು). ಹಳಗನ್ನಡದಲ್ಲಿ ವಿಜಾತೀಯ ದ್ವಿತ್ವಾಕ್ಷರ ರೂಪಗಳ ನಡುವೆ ಸ್ವರ ಸೇರಿ ಸ್ವರವ್ಯತ್ಯಯವಾಗುವುದು.(ಸಿಲ್ಕು–ಸಿಲುಕು, ಪೂಣ್ಕೆ–ಹೂಣಿಕೆ).

ಇದೇ ರೀತಿ ಹಳಗನ್ನಡಕ್ಕಿಂತ ನಡುಗನ್ನಡದಲ್ಲಿ ಸಾಕಷ್ಟು ಬದಲಾವಣೆಯನ್ನು ಕಾಣಬಹುದು. ಹಳಗನ್ನಡದಲ್ಲಿದ್ದ ಸಂಸ್ಕೃತದ ಪ್ರಭಾವದಿಂದ ದೂರ ಸರಿದು ದೇಶಿ ಮಟ್ಟುವಿನಲ್ಲಿ ಸಾಹಿತ್ಯ ರಚನೆಯಾಯಿತು. ಅಚ್ಚಗನ್ನಡ ದೇಶಿ ವರ್ಣಗಳೆಂದು ಕೇಶಿರಾಜ ಹೇಳಿದ್ದ ರಳ, ಕುಳ ಗಳು ಉಚ್ಚಾರಣೆಯಲ್ಲಿ ಮಾಯವಾಗಿ ಕೇವಲ ಬರಹದ ರೂಪದಲ್ಲಿ ಕಾಣಿಸಿಕೊಂಡವು. ಇದರಲ್ಲಿ ವಿಜಾತೀಯ ಸಂಯುಕ್ತಾಕ್ಷರಗಳು ಸಜಾತೀಯ ಸಂಯುಕ್ತಾಕ್ಷರಗಳಾಗಿ ಮಾರ್ಪಾಡಾದವು. ವಿರಳಾಕ್ಷರ ಪದಗಳು ಒತ್ತಕ್ಷರಗಳಾದವು. ಅಚ್ಚಗನ್ನಡ ವರ್ಣಗಳಾಗಿದ್ದ ರಳ ಕುಳ ಕ್ಕೆ ಬದಲಾಗಿ ಳಕಾರ ಬಳಕೆಗೆ ಬಂದಿತು. ದೀರ್ಘ ಸಮಾಸ ಪದಗಳು ನಡುಗನ್ನಡದಲ್ಲಿ ಕಡಿಮೆಯಾಗತೊಡಗಿದವು. ಸಂಸ್ಕೃತ ಶಬ್ದಗಳಿಗೆ ಬದಲಾಗಿ ಅಪಭ್ರಂಶ ರೂಪಗಳು ನಡುಗನ್ನಡದಲ್ಲಿ ಹೆಚ್ಚು ಬಳಕೆಯಾಗತೊಡಗಿದವು. ಸ್ಮಶಾನ–ಮಸಣ, ಆಕಾಸ–ಆಗಸ, ಭಕ್ತಿ–ಭಕುತಿ. ನಡುಗನ್ನಡ ಕಾಲದಲ್ಲಿ ಅರಬ್ಬರ ಮತ್ತು ಮುಸಲ್ಮಾನರ ದಾಳಿಯಿಂದಾಗಿ ಅರಬ್ಬೀ, ಪಾರಸಿ, ಹಿಂದೂಸ್ತಾನಿ, ಮರಾಠಿ ಶಬ್ದಗಳು ಕನ್ನಡಕ್ಕೆ ಬಂದು ಸೇರಿದವು.

ಅನುನಾಸಿಕ ಮತ್ತು ಅವರ್ಗೀಯ ವಂಜನಗಳಾದ ಯ ರ ಳ ಲ ಗಳು ಹಳಗನ್ನಡದಲ್ಲಿ ವ್ಯಂಜನಾಂತ್ಯವಾಗಿದ್ದು ನಡುಗನ್ನಡದಲ್ಲಿ ಸ್ವರಾಂತ್ಯವಾಗಿದೆ. ಕೇಶಿರಾಜ ಕನ್ನಡಕ್ಕೆ ವರ್ಜ್ಯವೆಂದು ಹೇಳಿದ್ದ ಮಹಾಪ್ರಾಣಾಕ್ಷರಗಳು ಅನ್ಯದೇಶಿ ಶಬ್ದಳಿಂದ ಕನ್ನಡದಲ್ಲಿ ಕಾಣಿಸಿಕೊಳ್ಳಲಾರಂಭಿಸಿತು. ಈ ಕಾಲಕ್ಕಾಗಲೇ ಕನ್ನಡದ ಕೆಲವು ಪ್ರಾದೇಶಿಕವಾಗಿ ಪ್ರಭೇದಗಳು ಇದ್ದವು. ಹಳಗನ್ನಡದಲ್ಲಿ ಕೇಶಿರಾಜ ಮತ್ತು ನಾಗವರ್ಮ ಹೇಳುವ ಉತ್ತರ ಮಾರ್ಗ ಮತ್ತು ದಕ್ಷಿಣ ಮಾರ್ಗಗಳಂತೆ ನಡುಗನ್ನಡದಲ್ಲಿ ಮೂಡಣ, ತೆಂಕಣ, ಪಡುವಣ, ಬಡಗಣ ಎಂಬ ಭೇದಗಳು ವಿಕಾಸಗೊಂಡವು.

ಕ್ರಿ.ಶ ೧೮ನೇ ಶತಮಾನದ ಸುಮಾರಿಗೆ ಅಂದರೆ ಬ್ರಿಟೀಶರ ಹಾಗೂ ಕ್ರೈಸ್ತ ಮಿಶನರಿಗಳ ಆಗಮನದಿಂದ ಕನ್ನಡ ಭಾಷೆಯಲ್ಲಿ ಹೊಸ ಬದಲಾವಣೆಗಳನ್ನು ಕಾಣಬಹುದು. ಕಿಟೆಲ್, ರೈಸ್ ಮುಂತಾದ ಪಾಶ್ಚಾತ್ಯ ಸಂಶೋಧಕರ ಪ್ರಭಾವದಿಂದ ಕನ್ನಡ ಭಾಷೆಯನ್ನು ಮತ್ತು ಸಾಹಿತ್ಯವನ್ನು ಕುರಿತಾಗಿ ಅಧ್ಯಯನಗಳು ಆರಂಭಗೊಂಡವು. ಸಾಹಿತ್ಯ ಗ್ರಂಥ ಮತ್ತು ಶಾಸನಗಳನ್ನು ಸಂಗ್ರಹಿಸಿ ಅವುಗಳ ಮಹತ್ತವನ್ನು ತಿಳಿಸಿದರು. ಕಿಟೆಲ್‌ರವರು ಶಾಸನಗಳನ್ನು ಮತ್ತು ಅನೇಕ ಕೃತಿಗಳನ್ನು ಸಂಗ್ರಹಿಸಿದರು. ಕನ್ನಡ ಮತ್ತು ಇಂಗ್ಲೀಷ್ ನಿಘಂಟನ್ನು ರಚಿಸಿ ಕನ್ನಡ ಶಬ್ದ ಭಂಡಾರಕ್ಕೆ ಒಂದು ರೂಪ ನೀಡಿದರು.

ಇದೇ ಕಾಲದಲ್ಲಿ ಕ್ರೈಸ್ತ ಮಿಶನರಿಗಳ ಆಗಮನ ಮತ್ತು ಮುದ್ರಣಾಲಯಗಳ ಸ್ಥಾಪನೆಯಿಂದಾಗಿ ಭಾಷೆಗೆ ಒಂದು ನಿರ್ದಿಷ್ಟ ರೂಪ ಬರಲಾರಂಭಿಸಿತು. ಕನ್ನಡದಲ್ಲಿ ಇಲ್ಲದ ಫ಼, ಜ಼, ಖ಼, ಧ್ವನಿಗಳು ಅರಬ್ಬರು, ಪೋರ್ಚುಗೀಸರು, ಇಂಗ್ಲೀಷರ ಆಗಮನದಿಂದ ಕನ್ನಡ ವರ್ಣಮಾಲೆಗೆ ಸೇರ್ಪಡೆಯಾದವು. ಉದಾ:- ಶಿಫ಼ಾರಸ್ಸು, ಡಜ಼ನ್, ಖ಼ಾತೆ, ಖ಼ಾನಾವಳಿ. ಇದರ ಜೊತೆಗೆ ಅನ್ಯದೇಶಿ ಶಬ್ದಗಳು ಯಾವುದೇ ಬದಲಾವಣೆ ಇಲ್ಲದೆ ನೇರವಾಗಿ ಸ್ವೀಕಾರವಾಗಿರುವುದನ್ನು ಕಾಣಬಹುದು. ಒಂದು ಭಾಷೆಯಲ್ಲಿ ಕೊಡು ಕೊಳುಗೆಯು ಸಹಜವಾಗಿ ನಡೆಯುತ್ತದೆ. ಆದರೆ ಕನ್ನಡದ ಭಾಷೆಯಲ್ಲಿ ಇದು ಹೆಚ್ಚು ನಡೆದಿದೆ. ವ್ಯಂಜನಾಂತ್ಯವಾಗಿ ಬಳಕೆಯಲ್ಲಿರುವ ಇಂಗ್ಲೀಷ್ ಶಬ್ದಗಳು ಸ್ವರಾಂತ್ಯವಾಗಿ ಬದಲಾವಣೆಯನ್ನು ಹೊಂದಿ ಕನ್ನಡದಲ್ಲಿ ನೇರವಾಗಿ ಬಳಕೆಯಲ್ಲಿರುವುದನ್ನು

ಕಾಣಬಹುದಾಗಿದೆ. ಅಲ್ಲದೆ ಇವುಗಳ ಬಳಕೆಯಿಂದಾಗಿ ಅಚ್ಚಗನ್ನಡದ ಶಬ್ದಗಳು ಅವನತಿಯನ್ನು ಹೊಂದುತ್ತಿದೆ.

ಹೊಸಗನ್ನಡದಲ್ಲಿ ಪಂಚಮಿ ವಿಭಕ್ತಿ ಪ್ರತ್ಯಯದ ಬಳಕೆ ಸಂಪೂರ್ಣವಾಗಿ ನಿಂತುಹೋಗಿದೆ. ನಡುಗನ್ನಡದಲ್ಲಿ ಕೇವಲ ಬರವಣಿಗೆಯ ರೂಪದಲ್ಲಿದ್ದ ರಳ ಕ್ಷಳಗಳು ಹೊಸಗನ್ನಡದಲ್ಲಿ ಕಂಡುಬರುವುದಿಲ್ಲ. ಸಂಸ್ಕೃತದ ವರ್ಣಮಾಲೆಯೇ ಬಳಕೆಗೆ ಬಂದಿತು. ಅನ್ಯದೇಶಿ ಶಬ್ದಗಳಿಂದಾಗಿ ಮಹಾಪ್ರಾಣದ ಬಳಕೆ ಅನಿವಾರ್ಯವಾಯಿತು. ಹೀಗೆ ಕನ್ನಡ ಭಾಷೆಯಲ್ಲಿ ಕಾಲದಿಂದ ಕಾಲಕ್ಕೆ ಧ್ವನಿ,ಧ್ವನಿಮಾ, ಆಕೃತಿಮಾ, ವಾಕ್ಯ ರಚನೆ ಮುಂತಾದವುಗಳಲ್ಲಿ ಸಾಕಷ್ಟು ಬದಲಾವಣೆಯಾಗಿರುವುದನ್ನು ಕಾಣಬಹುದಾಗಿದೆ.

ನಡುಗನ್ನಡದಲ್ಲಿ ಕಾಣಿಸಿಕೊಳ್ಳಲಾರಂಬಿಸಿದ ಪ್ರದೇಶಿಕ ಉಪಭಾಷೆಗಳು ಹೊಸಗನ್ನಡ ಕಾಲಕ್ಕೆ ಸಾಕಷ್ಟು ರೀತಿಯಲ್ಲಿ ಅಸ್ಥಿತ್ವಕ್ಕೆ ಬಂದಿದ್ದವು. ಇದರ ಜೊತೆಗೆ ಜಾತಿ ವರ್ಗದ ಹಿನ್ನಲೆಯಲ್ಲಿ ಸಾಮಾಜಿಕ ಉಪಭಾಷೆಗಳು ಕಾಣಿಸಿಕೊಂಡವು. ಇವುಗಳು ಒಂದೇ ಭಾಷೆಯ ಅಡಿಯಲ್ಲಿ ಬರುತ್ತವೆಯಾದರೂ ಅವುಗಳ ಧ್ವನಿ ಉಚ್ಚಾರಣೆ, ಶಬ್ದಗಳ ಬಳಕೆಯಲ್ಲಿ ಸಾಕಷ್ಟು ಬದಲಾವಣೆಗಳನ್ನು ಕಾಣಬಹುದಾಗಿದೆ.

ಕನ್ನಡ ಭಾಷೆ ಮತ್ತು ಸಾಹಿತ್ಯದ ಮೇಲೆ ಅನ್ಯ ದೇಶಗಳ ಭಾಷೆ ಮತ್ತು ಸಾಹಿತ್ಯ ಸಾಕಷ್ಟು ಪ್ರಮಾಣದಲ್ಲಿ ಪ್ರಭಾವ ಬೀರಿತು. ಸಾಹಿತ್ಯದ ಶೈಲಿ ಮತ್ತು ಅದರ ಚಿಂತನೆಯಲ್ಲಿ ಸಾಕಷ್ಟು ಬದಲಾವಣೆಗಳನ್ನು ಕಾಣಬಹುದಾಗಿದೆ. ಹೀಗೆ ಸುಮಾರು ೧೫೦೦ ಸಾವಿರ ವರ್ಷಗಳ ಲಿಖಿತ ಆಧಾರಗಳು ದೊರೆತಿದ್ದರೂ ಅದನ್ನು ಸಮರ್ಥಿಸಿಕೊಳ್ಳುವಲ್ಲಿ ವಿಫಲವಾಗಿರುವುದು ನಮ್ಮ ದುರ್ದೈವ. ಇಂತಹ ಭಾಷೆಯ ಕುರಿತ ಸೂಕ್ಷ್ಮ ಅಧ್ಯಯನ ಮುಖ್ಯವಾದುದು.

